# ಅಮೃತಕುಂಭ

( ರೂಪಕ ಕಥಾ ಸಂಗ್ರಹ )



ಲೇಖಿಕೆಯರು :

**ಪ್ರಭುದಾಸಿ ನಿವೇದಿತಾ**

ಮೂಲ ಮರಾಠಿಯಿಂದ ಅನುವಾದಕರು :

ಶ್ರೀ. ವಿನೀತ ರಾಮಚಂದ್ರರಾಯರು

೧೯೫೭

ಪ್ರದೀಪ ಕಾರ್ಯಾಲಯ, ಧಾರವಾಡ

# ಅರ್ಪಣ



ಪರದುಃಖ ನೋಡಿ

ಯಾರ ನಯನಗಳಲ್ಲಿ ನೀರೂರುವುದೋ,

ದಯೆಯೇ

ಯಾರ ಸ್ವಭಾವವಾಗಿರುವುದೋ,

ಅಂತಹ ಸ್ತ್ರೀ-ಪುರುಷರ ಚರಣದಲ್ಲಿ

ಈ ಸಂಕಲನವನ್ನು

ನಾನು

ವಿನಮ್ರತೆಯಿಂದ ಅರ್ಪಿಸುವೆ.

— ಲೇಖಿಕೆ.

# ಮುನ್ನುಡಿ

" ಅಮೃತಕುಂಭ " ಎಂಬೀ ಕಥಾಸಂಗ್ರಹಕ್ಕೆ ಮುನ್ನುಡಿಯ ರೂಪವಾಗಿ ಎರಡು ಮಾತುಗಳನ್ನು ಹೇಳಲು ಅವಕಾಶ ದೊರೆತುದು ನನಗೆ ಸಂತೋಷದ ಸಂಗತಿಯಷ್ಟೇ ಅಲ್ಲ, ಅದೊಂದು ಭಾಗ್ಯ ಎಂದು ತಿಳಿಯುತ್ತೇನೆ. ಇಂಥ ಮಾತು ಬಹಳ ಬಳಕೆಯಿಂದ ಕೇವಲ ಅಲಂಕಾರಪ್ರಾಯವಾಗಿ ತೋರಬಹುದು. ಸಂತೋಷವೆಂಬ ಉಪಚಾರವನ್ನು ಯಾರೂ ಅರ್ಥ ಮಾಡಿಕೊಳ್ಳಬಹುದು. ಭಾಗ್ಯ ಎಂಬ ಮಾತಿನ ತೂಕ ಹೆಚ್ಚಾಯಿತೇನೋ ಎನಿಸಬಹುದು. ಆದರೆ ಈ ಸಂಗ್ರಹದೊಳಗಿನ ಎಂಟೂ ಕಥೆಗಳನ್ನು ಚಿತ್ತಗೊಟ್ಟು ಓದಿದವರು ತಾವೂ ಭಾಗ್ಯವಂತರು ಎಂದು ಅರಿತಾಗ ಈ ಸಂಗ್ರಹದ ಸಂಬಂಧ ನನಗೆ ಬಂದುದು ಭಾಗ್ಯ ಎಂದು ನಾನು ಹೇಳಿದುದರ ಅರ್ಥವಾಗಬಹುದು.

ಒಂದು ಅರ್ಥದಲ್ಲಿ ಈ ಕಥಾಲೇಖನ ದಂಪತಿಕಾರ್ಯ ಎಂದೂ ಹೇಳಬಹುದು. ಮೂಲಕಥೆಗಳು ಮರಾಠಿಯಲ್ಲಿ ಬರೆದುವು; ಆದರೆ ಈಮೊದಲು ಎಲ್ಲಿಯೂ ಪ್ರಕಟವಾದುವುಗಳಲ್ಲ 'ಪ್ರದೀಪ'ದ ವಾಚಕರಿಗಾಗಿಯೇ ಬರೆದುವುಗಳು. ಅವುಗಳನ್ನು ಕನ್ನಡಿಸಿದವರು, ತಮ್ಮ ಕಾರ್ಯ ಸಹೃದಯತೆಯಿಂದ ಮಾಡಿದ್ದು ಸಹಜವೆನಿಸಬಹುದಾದರೂ, ಕನ್ನಡದ ಜಾಯಮಾನ ಉಕ್ತಿಯ ಔಚಿತ್ಯ, ಶೈಲಿಯ ಸಹಜ ತರಲತೆ ಇವಾವ ಗುಣಗಳಿಗೂ ಧಕ್ಕೆ ತಗಲವಂತೆ, ಅಷ್ಟೇ ಅಲ್ಲದೆ, ಪುಷ್ಟಿ

ಗೊಂಡು, ಉಜ್ಜ್ವಲವಾಗಿ ಕನ್ನಡಕ್ಕೆ ಹೊಂದಿಕೆಯಾಗಿ ಬರುವಂತೆ ಅಭಿವ್ಯಕ್ತಗೊಳಿಸಿದುದು ಅನುವಾದಕರ ಸೃಜನಶಕ್ತಿಯನ್ನೂ ಸೂಚಿಸುತ್ತದೆ. ಮೂಲಕಥೆಗಳನ್ನು ಬರೆದವರ ಶ್ರೀಮತಿ ಪ್ರಭುದಾಸಿ ನಿವೇದಿತಾ ಅವರು; ಅನುವಾದಿಸಿದವರು ಶ್ರೀಯುತ ವಿನೀತ ರಾಮಚಂದ್ರರಾಯರು. ಈ ಸಂಗ್ರಹವನ್ನು ದಾಂಪತ್ಯಕೃತ್ಯವೆಂದು ಮೇಲೆ ಉಲ್ಲೇಖಿಸಿದ್ದಾಗಿದೆ. ಇದೇ ಬಗೆಯ ಸಹಕಾರ್ಯವನ್ನು ಶ್ರೀ. ವಿನೀತ (ಈಗಿನ ಬೆಳಗಾವಿ) ರಾಮಚಂದ್ರರಾಯರು ಈ ಮೊದಲೂ ಪಡೆದಿದ್ದರು. ದಿವಂಗತ ಶ್ಯಾಮಲಾದೇವಿಯವರು ತಮ್ಮ ಸಣ್ಣ ಪ್ರಾಯದಲ್ಲಿಯೇ ಒಳ್ಳೇ ಕತೆಗಾರ್ತಿಯರೆಂದು ಹೆಸರು ಗಳಿಸಿ ಹೋದುದನ್ನು ಕನ್ನಡ ರಸಿಕರು ಮರೆತಿರಲಾರರು. ಆ ಕಥೆಗಳಲ್ಲಿ ಒಂದು ಸಾಹಿತ್ಯಿಕ ಸಾಮಾಜಿಕ ಒಲವಿತ್ತು. ಈಗಿನ ಈ ಕಥೆಗಳು ಸದ್ಯದ 'ಪ್ರದೀಪ'ದ ಕಾರ್ಯಕ್ಕೆ ಅನುಗುಣವಾಗಿ ಭಕ್ತಿಭಾವದ ಒಂದು ಅಭೂತಪೂರ್ವ ಸಂಸ್ಕಾರವನ್ನು ಪಡೆದು ಬಂದಿವೆ. ಈ ಲೇಖಿಕೆಯರು ಮರಾಠಿ ಭಾಷೆಯಲ್ಲಿ ಬರೆದ ಭಾವಗೀತಗಳ ಒಂದೆರಡು ಸಂಗ್ರಹಗಳು ಇದೇ ಬಗೆಯ ಗುಣದಿಂದ ತುಂಬಿರುವುದನ್ನು ನಾನು ಅವರ ಸಂಗ್ರಹಗಳನ್ನೋದಿ ಅನುಭವಿಸಿದ್ದೇನೆ. ಇಲ್ಲಿಯ ಕಥಾಸರಣಿ ಉತ್ತಮ, ಅಲ್ಲದೆ ಅಭಿನವ.

ಸಂಗ್ರಹದಲ್ಲಿ ಎಂಟೇ ಎಂಟು ಕಥೆಗಳಿವೆ. ಅಷ್ಟೇ ಕಥೆಗಳನ್ನೋದಿಯೂ ಮನಸ್ಸಿಗೆ ಒಂದು ಬಗೆಯ ತೃಪ್ತಿಯುಂಟಾಗುತ್ತದೆ. ಆ ತೃಪ್ತಿಯ ಜೊತೆಗೆ ಇಂಥ ವಸ್ತು ಇನ್ನಷ್ಟು ಬೇಕು ಎಂಬ ಲೋಭವೂ ತಿಳಿಯದೆ ಹುಟ್ಟುತ್ತದೆ. ಈ ಲೋಭ ವ್ಯರ್ಥ ಆಶೆಯಲ್ಲ. ಯಾಕೆಂದರೆ ಈ ಈರ್ವರ ಲೇಖನ

ಕಾರ್ಯ ಮುಂದೆ ಸಾಗಿದೆಯೆಂದು ಶುಭಸಂಕೇತ. ಅರ್ಥಾತ್ ಇಲ್ಲಿಯ ಕಥೆಗಳು ನಾವು ಸಾಮಾನ್ಯವಾಗಿ ಸಣ್ಣ ಕಥೆಗಳೆಂದೋ ದೊಡ್ಡ ಕಥೆಗಳೆಂದೋ ತಿಳಿದ ಯಾವ ಜಾತಿಯವುಗಳೂ ಅಲ್ಲ. ಇದರದು ತನ್ನದೇ ಜಾತಿ. ಇವು ಒಂದು ಬಗೆಯ ಒಡಗತೆಗಳು. ಆದರೆ ಅತಿ ಚಮತ್ಕಾರ ಇದರ ಮುಖ್ಯ ಗುಣವಲ್ಲ. ಇವು ನೀತಿಬೋಧಕಗಳಾದ ಬರಿಯ ರೂಪಕಕಥೆಗಳೂ ಅಲ್ಲ. ಆದರೂ ಒಡಗತೆಯ ಕುತೂಹಲ ಕೆರಳಿಸುವ ರೀತಿ ಮತ್ತು ರೂಪಕದ ಒಂದು ಚೌಕಟು ಇವುಗಳಲ್ಲಿ ಇರುವುದರ ಜೊತೆಗೆ ಕಾವ್ಯೋಕ್ತಿಯ ಧ್ವನಿಸಾಮರ್ಥ್ಯ ಈ ಕಥೆಗಳಲ್ಲಿ ಎಡೆಯೆಡೆಗೂ ಮಿಂಚುವುದು. ಇಲ್ಲಿಯ ಉಕ್ತಿಗಳು ಝಗ್ಗನೆ ಸತ್ಯದ ಸೌಂದರ್ಯವನ್ನು ಮಿಂಚಿಸುವವು. ಸೌಂದರ್ಯದ ಸತ್ಯವನ್ನು ನಂಬುಗುವಂತೆ ಮಾಡುವವು. ಉಕ್ತಿಗಳ ವೈಪುಲ್ಯ ಇರುವದರಿಂದ ಅವು ಇವು ಎಂದು ಎತ್ತಿ ಹೇಳುವ ಕಾರಣವಿಲ್ಲ. ಉದಾಹರಣೆಗೆ, ಇಂಥ ಒಂದು ಉಕ್ತಿಯನ್ನು ನೋಡೋಣ :—

**ಕೆಟ್ಟುದು ಎಂದಾದರೂ ಕಸುವುಳ್ಳುದ್ದಾದೀತೇ ?**

ಇದು ನೀತಿ ವಾಕ್ಯವಲ್ಲ. ವಿಚಾರದ ಮಥನದಿಂದ ಅದರಾಚೆಯ ಭಾವದ ಬಾಗಿಲು ತೆರೆದಾಗ ಇಂಥ ನುಡಿಗಳು ಆಕಾಶಭೂಷಿತದಂತೆ ಎಲ್ಲಿಂದಲೋ ಬಂದು, ಎತ್ತೋ ಕರೆದೊಯ್ಯುವವು.

ಇಲ್ಲಿಯ ಒಂದೊಂದು ಕಥೆಯಲ್ಲಿಯೂ ಎಂಥದೋ ಒಂದು ದಾಂಪತ್ಯ ಸಂಬಂಧದ ರೂಪಕವಿದೆ ಎನ್ನಬಹುದು. ಭಕ್ತಿಮತಿ ಮತ್ತು ಭಾನನಾಥ, ಧರ್ಮ ಮತ್ತು ಸುನೀತಿ, ನಿರ್ಮಲಾ

ಮತ್ತು ಮಾಧವ, ಶಿವ ಹಾಗೂ ಗೌರಿ, ಹೀಗೆ ಭಾವಲೋಕದ ಹಲಜೀವಗಳು ಅಭಾವಿತವಾಗಿ ಏನೇನೋ ಸೋಗು ತೊಟ್ಟು, ತಮ್ಮ ಜೀವನ ನಾಟ್ಯಕೌಶಲ್ಯದಿಂದ ಒಂದು ಬೋಧಕ್ಕೆ ಹಾದಿ ತೆರೆಯುವವು. ಅಂತೆಯೇ ಇವು ನೀತಿಬೋಧೆಯ ಕಥೆಗಳಲ್ಲ. ಇವು ಪ್ರಬುದ್ಧಭಾವದ ಕಥೆಗಳು; ಪ್ರಬೋಧಗೊಳಿಸುವ ಕಥೆಗಳು; ಹೃದಯದ ಪ್ರದೀಪದ ಬೆಳಕಿನಲ್ಲಿ ಅಪಾರ್ಥಿವ ರೂಪಗಳನ್ನು ತೊಟ್ಟು ನೆರಳಂತೆ ಸಂಚರಿಸುವ ತಿರುಳಿನ ಕುರುಹುಗಳು ಇವು. ಇವುಗಳ ವಾಚನದಿಂದ ಹೃದಯವಂತರ ರಾಜ್ಯ ತೆರೆದು ಅವರವರ ಭಾವಲೋಕದ ಜೀವಿಗಳ ಸಂದರ್ಶನವು ಅವರವರಿಗೆ ಆಗಲು ಸಾಕು. ಇವು ಒಮ್ಮೆ ಓದಿ ಮುಗಿಸಿಬಿಡುವ ಕಥೆಗಳಲ್ಲ. ಓದಿಓದಿದಂತೆ ಮೆಲುಕು ಹಾಕಿ ನುರಿಸಿ, ಭಾವದಲ್ಲಿ ಜೀರ್ಣಿಸಿಕೊಳ್ಳಬೇಕಾದ ಕಥೆಗಳು. ಆದರೂ ಇಲ್ಲಿ ವಿಚಾರದ ದವಡೆಗೆ ನಿಲುಕದ ಕಬ್ಬಿಣದ ಕಡಲೆಯ ಸೌರಂಭವಿಲ್ಲ. ಇಲ್ಲಿಯ ಅನುಭವ ಮೌನದ ಗುಹೆಯಲ್ಲಿ ಒಮ್ಮೆಗಿಲೆ ಉಲಿಯುವ ಭಾವಬೋಧಕ ಧ್ವನಿಯಂತೆ, ಒಂದುಬಗೆಯ ಸಂಗೀತದ ಪ್ರಚೋದನೆಯಂತೆ ಇದೆ. ಆದಕಾರಣ ಈ ಕಥೆಗಳ ವಿಷಯದಲ್ಲಿ ವಿವೇಚನೆಯ ವಿವೇಕ ಒಂದು ರೀತಿಯ ಅವಿವೇಕ.

ನಾನು ಇಷ್ಟೇ ಹೇಳಬಲ್ಲೆ—ಈ ಕಥೆಗಳನ್ನು ನಾನು ಓದಿ ಆನಂದಪಟ್ಟಿದ್ದೇನೆ. ಕೆಲವುಗಳನ್ನು ಯಾವುದೋ ಉಕ್ತಿಯ ಹತ್ತರ ಅರ್ಥಕ್ಕೆ ಬಿಟ್ಟಿದ್ದೇನೆ—ನನ್ನ ಭಾವದಲ್ಲಿ ನಾನು ನಿಮಗ್ನನಾದ್ದರಿಂದ; ಅಥವಾ ಮತ್ತೆ ಯಾವದೋ ವಚನರತ್ನವನ್ನು ಯಾವುದೋ ಪುಟದ ಮೇಲೆ ಕಂಡು ಅದರಗುಂಟ ಚಿತ್ರ ಪ್ರವಾಹವನ್ನು ಹರಿಬಿಟ್ಟಿದ್ದೇನೆ. ಭಾವುಕರಾದ ವಾಚಕರಿಗೆ

ಈ ಅನುಭವ ಬರದೇ ಇರದು. ವಿಶೇಷವಾಗಿ ಸ್ತ್ರೀಸಹಜವಾದ ಒಂದು ಮಾಧುರ್ಯ, ಕೋಮಲತೆ, ಗಾಂಭೀರ್ಯದ ಒಂದು ಮೌನ, ಮೌನದಲ್ಲಿ ಸ್ಫುರಿಸಬಹುದಾದ ಇಂಗಿತ ವಾಕ್ಯ—ಈ ಬಗೆಯ ಗುಣಗಳಿಗೆ ಮಾರುಹೋದ ಚಿತ್ತಕ್ಕೆ ಈ ಸಂಗ್ರಹದೊಳಗಿನ ಒಂದೇ ಕಥೆಯೇಕೆ,ತಮ್ಮ ತಮ್ಮ ಪರಿಯಿಂದ ಒಂದೊಂದೂ ಕಥೆಯೂ ಅಮೃತಕುಂಭವಾಗಿ ತೋರೀತು. ಕಥೆಗಳನ್ನು ಏಕಾಂತದಲ್ಲಿ ಓದಬೇಕು, ಮನಸ್ಸಿನಲ್ಲಿಯೇ ಓದಿಕೊಳ್ಳಬೇಕು. ಕಣ್ಣುಮುಚ್ಚಿ ಇಲ್ಲಿಯ ಭಾವಲಹರಿಯನ್ನು ಹೃದ್ಗತ ಮಾಡಿಕೊಳ್ಳಬೇಕು. ಇದು ಈ ಕಥೆಗಳಿಗೆ ಹೋಗುವ ಹಾದಿ. ಉಳಿದ ಹೆಚ್ಚಿನ ಮಾತು ಇಂತಹ ನಾಜೂಕಿನ ದ್ರವ್ಯಕ್ಕೆ ಮುನ್ನುಡಿಯಲ್ಲಿಯೂ ಕೂಡ ಭಾರವೆಂದು ತೋರೀತು. ಅಮೃತಕುಂಭದ ಹನಿಹನಿಯೂ ಅಮೃತ. ಇಂಥ ಪ್ರಶಂಸೆಯಿಂದ ಯಾರೂ ಬೇಜಾರುಪಡುವ ಕಾರಣವಿಲ್ಲ. ಲೋಕವು ಭಿನ್ನರುಚಿಯದು —ಇದು ಪ್ರಸಿದ್ಧವೇ ಇದೆ. ಆದರೂ ಎಂಥ ರುಚಿಯುವರಿಗೂ ಇಲ್ಲಿಯ ಕೆಲ ರಸೋಕ್ತಿಗಳಾದರೂ, ಕಲ್ಪನಾವಿಲಾಸದ ರೀತಿಗಳಾದೂ ಮೆಚ್ಚಿಕೆಯಾಗದೆ ಹೋಗಲಾರವೆಂದು ತಿಳಿದಿದ್ದೇನೆ.

**ಪ್ರೊ. ದ. ರಾ. ಬೇಂದ್ರೆ, ಎಂ. ಎ.**

# ಲೇಖಿಕೆಯ ಎರಡು ನುಡಿ



ಸಾಹಿತ್ಯವೆಂದರೇನು ಎಂಬುದನ್ನರಿಯದ ನನ್ನಂತಹ ಅ-ಸಾಹಿತ್ಯಿಕ ಸ್ತ್ರೀಯು ಬರೆದ ಈ ರೂಪಕಕಥೆಗಳು 'ಪ್ರದೀಪ'ದ ವಾಚಕರಿಗೆ ತುಂಬಾ ರುಚಿಸಿದವೆಂಬುದರಿಂದ ನನಗೆ ಆನಂದವಾಗುವುದು ಸ್ವಾಭಾವಿಕವೇ ಇದೆ. 'ಪ್ರದೀಪ'ದ ಸಂಪಾದಕರು 'ಪ್ರದೀಪ'ಕ್ಕಾಗಿ ಏನಾದರೂ ಬರೆದು ಕೊಡಲು ನನಗೆ ಕೇಳಿದರು. ಆದರೆ ನಾನು ಏನು ಬರೆಯಬೇಕು, ಹೇಗೆ ಬರೆಯಬೇಕು? ಲೇಖನವನ್ನು ಬರೆಯಬೇಕೆಂದರೆ ನನ್ನ ಅಭ್ಯಾಸವಾವುದೂ ಇಲ್ಲ. ಕಥೆಯನ್ನು ಬರೆಯಬೇಕೆಂದರೆ ಕಥೆಯ ಸೂತ್ರ ನನಗರಿಯದು. 'ಪ್ರದೀಪ'ದ ಸಂಪಾದಕರು ಮತ್ತೆ ನನಗೆ, "'ಪ್ರದೀಪ'ಕ್ಕಾಗಿ ಏನಾದರೂ ಬರೆಯಲೇ ಬೇಕು, ಅದೊಂದು ನೀವು ಮಾಡಬೇಕಾದ ಕೆಲಸ" ಎಂದು ಹೇಳಿದರು; ಆಗ ಮಾತ್ರ ನಾನು ಅಂಜಿದೆನು. ಅಹುದು. ತಮ್ಮ ಕೆಲಸ ತಪ್ಪಿಸಿ, ಹೃದಯದ ಚಂಚ್ಚುವಿಕೆಯನ್ನು ಸಹಿಸಲು ಯಾರು ಸಿದ್ಧರಾದಾರು? ಹೃದಯವು ಹೇಳಿದಂತೆ ಬರೆಯತಕ್ಕದ್ದೆಂದು ನಾನು ತೀರ್ಮಾನ ಮಾಡಿದೆನು. ರಾತ್ರಿಯ ಪ್ರಶಾಂತ ವೇಳೆಯನ್ನು ನಾನು ಇದಕ್ಕಾಗಿ ಆರಿಸಿಕೊಂಡೆನು, ಹಾಗೂ 'ಕಾಣದ ಪ್ರಾಣೇಶ್ವರ' ಬರೆಯಲು ಪ್ರಾರಂಭಿಸಿದೆನು. ಬರೆಬರೆಯುತ್ತಿರುವಾಗಲೇ ನನ್ನ ಮನಸ್ಸು ತಾನೇ ಪ್ರಣಯಿನಿಯಾಗಿ ಪ್ರಾಣೇಶ್ವರನನ್ನು ಶೋಧಿಸುತ್ತ ಹೊರಟುಹೋಗುತ್ತಿತ್ತು, ಮತ್ತು ಕಥೆಯು ಅಲ್ಲಿಗೇ ನಿಂತು

ಬಿಡುತ್ತಿತ್ತು. ಮತ್ತೆ ಮನಸ್ಸು ಬರೆಯುವ ಸ್ಥಿತಿಯನ್ನೈದಿ ದೊಡನೆಯೇ ನಾನು ಬರೆಯತೊಡಗುತ್ತಿದ್ದೆನು. ಗಾಜಿನ ಹಂಚಿನೊಳಗಿಂದ ಪ್ರಭಾತದ ಕಿರಣಗಳು ಕಾಣಿಸಿಕೊಂಡವು, ಹಾಗೂ ಕತೆಯು ಅಂತೂ ಒಮ್ಮೆ ಮುಗಿಯಿತು.

'ಕಾಣದ ಪ್ರಾಣೇಶ್ವರ' ಓದಿ 'ಪ್ರದೀಪ'ದ ಹಲವು ವಾಚಕರು ತಮ್ಮ ಸಾತ್ವಿಕ ಆನಂದವನ್ನು ವ್ಯಕ್ತಗೊಳಿಸಿದರು. ಕತೆಯ ಪ್ರಶಂಸೆ ಮಾಡುವವರು ಕೆಲವರು, 'ಈ ಪ್ರಭುದಾಸಿ ಯಾರು ?' ಎಂದು ಕುತೂಹಲದಿಂದ ಕೇಳುವವರು ಕೆಲವರು. ಅದೇನೇ ಇರಲಿ, 'ಪ್ರದೀಪ'ದ ವಾಚಕರ ಸದಭಿರುಚಿಯೇ ಈ ಕತೆಗಳನ್ನು ಒಂದಾದ ಮೇಲೊಂದು ಬರಿಯಲು ಹಚ್ಚಿತು ಎಂದು ಹೇಳದೆ ಇರಲಾರೆ.

ಕವಿವರ್ಯ ಅಣ್ಣ ಬೇಂದ್ರೆಯವರು 'ಅಮೃತಕುಂಭ'ಕ್ಕೆ ಬರೆದ ಮುನ್ನುಡಿಯನ್ನು ಓದಿದೆನು. ಮನೆಯ ಒಳಗಡೆಯಲ್ಲಿಯೇ ಆಡುತ್ತಿದ್ದ ಕೂಸು ಹೊರಗೆ ಬಂದು, ಸಂಧ್ಯಾ ಸಮಯದ ಆಕಾಶ, ಅದರ ಅಪಾರ ವಿಸ್ತಾರ ಹಾಗೂ ರಂಗುರಂಗಿನ ಸೌಂದರ್ಯ ನೋಡಿ ಆನಂದ-ಆಶ್ಚರ್ಯಗಳನ್ನು ಒಂದೇ ಕಾಲಕ್ಕೆ ಅನುಭವಿಸುವಂತೆ ನನಗಾಯಿತು. ಕುಂದಣದಲ್ಲಿ ಕೂಡಿಸಿದ ರತ್ನದ ಚಕಚಕಿಸುವ ಕಿರಣಗಳನ್ನು ಯಾರೂ ಕಂಡುಕೊಳ್ಳಬಲ್ಲರು; ಆದರೆ ಕುಂದಣದಲ್ಲಿ ಅಡಗಿದ ರತ್ನದ ಭಾಗವೂ ಪ್ರಕಾಶಮಯವಾಗಿದೆಯೆಂದು ರತ್ನಪರೀಕ್ಷಕನೊಬ್ಬನು ತೋರಿಸಿಕೊಟ್ಟರೆ ಎಂತು ಸೋಜಿಗವೆನಿಸುವುದೋ ಅಂತೆಯೇ ನನಗೂ ಅನಿಸಿತು. ಅಂತಃಕರಣದ ಭಾಷೆಯಲ್ಲಿ ಬರೆಯಲಾದ 'ಅಮೃತಕುಂಭ'ದಲ್ಲಿ ಹೃದಯಾನುಭವವು ತುಂಬಿದೆಯಲ್ಲದೆ, ಈ ಬರೆವಣಿಗೆಯು ಸಾಹಿತ್ಯದ ರೂಪ-

ರಸ-ಗಂಧಗಳಿಂದಲೂ ಒಡಗೂಡಿದೆ ಎಂಬುದನ್ನು ಕೇಳಿ ನನಗೆ ಅಚ್ಚರಿಯೆನಿಸದಿದ್ದೀತೆ ? ಇದಕ್ಕುತ್ತರ ದೊರಕಿಸಲು ನನ್ನ ಮನಸ್ಸು ತನ್ನ ಪರಿಚಿತ ಮಾರ್ಗ ಹಿಡಿದು ಓಡಿಬಿಟ್ಟಿತು. ಎಲ್ಲಿ ಸರ್ವ ದುಃಖಗಳ ನಿವಾರಣೆಯಾಗುವುದೋ, ಎಲ್ಲಿ ಸೌಖ್ಯ ವೃದ್ಧಿಯಾಗುವುದೋ, ಎಲ್ಲಿ ಸರ್ವ ಶಂಕೆಗಳ ನಿರಸನವಾಗು ವುದೋ, ಎಲ್ಲಿ ಎಲ್ಲ ಒಡಪಗಳಿಗೆ ಅರ್ಥ ಸಿಕ್ಕುವುದೋ, ಆ ಪರಮಾತ್ಮಪದದತ್ತ ಓಡಿತು ನನ್ನ ಮನಸ್ಸು.

ನನ್ನ ವ್ಯಕ್ತ-ಅವ್ಯಕ್ತ ಕೃತಿಗಳಿಗೆ ಯಾವನು ಸಾಕ್ಷಿಯಾಗಿರುವ ನೆಂದು ನನಗೆ ಅನಿಸಿದೆಯೋ, ನನ್ನ ಪ್ರಕಟ-ಅಪ್ರಕಟ ಭಾವನೆ ಗಳನ್ನು ಯಾವನು ನಿರೀಕ್ಷಿಸುತ್ತಿರುವನೆಂದು ನನಗೆ ಹೊಳೆ ದಿದೆಯೋ, ಯಾರ ಭೀತಿಯಿಂದ ನಾನು ಸುವ್ಯವಸ್ಥಿತಳಾಗಿರು ವೆನೋ, ಯಾರು ಸೈರಿಸಲಿಕ್ಕಿಲ್ಲವೆಂದು ನಾನು ಅಂತರ್ಬಾಹ್ಯ ವಾಗಿ ಶುಚಿರ್ಭೂತಳಾಗಿರುವೆನೊ, ಯಾರಿಗೆ ಸೇರಲಿಕ್ಕಿಲ್ಲ ವೆಂದು ನಾನು ಪ್ರೇಮ ಮಾರ್ಗವನ್ನು ಅಂಗೀಕರಿಸಿರುವೆನೋ ಯಾರು ಕ್ಷಮಿಸಲಿಕ್ಕಿಲ್ಲವೆಂದು ನಾನು ಸತ್ಯನಿಷ್ಠೆಯನ್ನು ಕೈಕೊಂಡಿರುವೆನೋ, ಆ ನನ್ನ ಹೃತ್ಪ್ರಭುವಿಗೆ ಕೇಳಿದೆ,— "ಪ್ರಭೋ! ಕಾಯಿಯಲ್ಲಿ ಮಧುರರಸವು ಎಂತು ಉಂಟಾ ಯಿತು ? ಹೃದಯದ ಮೃದುಲ ಭಾಷೆಯೊಳಗಿಂದ ರಸಭರಿತ ಸಾಹಿತ್ಯವು ಎಂತು ನಿರ್ಮಾಣವಾಯಿತು ?" ಹೃತ್ಪ್ರಭು ವೆಂದನು, — "ಯಾವ ನಿಯಮದಿಂದ ಬೀಜ ಮೊಳೆಯು ವುದೊ, ಮಗು ಬಳೆಯುವುದೋ, ಮೊಗ್ಗು ಅರಳುವುದೋ, ಅದೇ ನಿಯಮದಿಂದ ದುಃಖವೂ ಸುಖವೂ ಬೆಳೆಯುತ್ತವೆ, ದೌರ್ಬಲ್ಯವೂ ಸಾಮರ್ಥ್ಯವೂ ಬೆಳೆಯುತ್ತವೆ, ಅಶಾಂ ತಿಯೂ ಶಾಂತಿಯೂ ಬೆಳೆಯುತ್ತವೆ; ಅದೇ ನಿಯಮದಿಂದ

ಸು-ಮನವು ವಿಕಸಿಸುತ್ತದೆ. ಆಕಾಶದ ವ್ಯಾಪಕತೆಯನ್ನು ನೋಡುತ್ತ, ಸೂರ್ಯಚಂದ್ರರ ಗತಿಯನ್ನು ನೋಡುತ್ತ, ತಾರೆಗಳ ಮಿನುಗುವಿಕೆ ನೋಡುತ್ತ, ತಡಿಲ್ಲತೆಯ ತೇಜಸ್ವಿತೆಯನ್ನು ನೋಡುತ್ತ ಮನವು ಸ್ವಾಭಾವಿಕ ಮನೋಧರ್ಮದಿಂದ ನಡೆದರೆ, ಮನವೇ ಸು-ಮನವಾಗುವುದು. ಮನವು ಲೌಕಿಕ ಸೃಷ್ಟಿಯಲ್ಲಿ ವಿಹರಿಸುವುದು, ಸು-ಮನವು ಅಂತಃ ಸೃಷ್ಟಿಯಲ್ಲಿ ವಿಹರಿಸುವುದು ಮತ್ತು ಪರಮಾತ್ಮ ಪದದಲ್ಲಿ ವಿಶ್ರಮಿಸುವುದು. ಪರಮಾತ್ಮ ಪದದಲ್ಲಿ ವಿಶ್ರಮಿಸುವ ಸ-ಮನವು ಭಕ್ತಿಯಿಂದಲೆಯುವುದು; ಪ್ರೇಮರಸರಂಜಿತವಾಗುವುದು; ಶಾಂತಿಯಿಂದುಲಿಯುವುದು; ಆನಂದದಿಂದ ತುಂಬುವುದು ಹಾಗೂ ಸಾಹಿತ್ಯದ ಬೆಡಗು – ಬಿನ್ನಾಣಗಳಿಂದ ಮೆರೆಯುವುದು." ಮದೀಯ ಹೃತ್ಪ್ರಭು ಹೀಗೆಂದೊಡನೆ ನನ್ನ ಒಡಪವು ಒಡೆಯಿತು ಹಾಗೂ ಆನಂದವಷ್ಟೆ ಉಳಿಯಿತು.

— ಪ್ರಭುದಾಸಿ ನಿವೇದಿತಾ

# ಪ್ರಕಾಶಕರ ಮಾತು



ತೆರೆಯ ಮರೆಯಲ್ಲಿರುವ ಸಾರಸ್ವತ ಸಂಪತ್ತನ್ನು ಹೊರಗೆ ತಂದು ವಾಚಕರಿಗೆ ಹೊಸ ರಸಾನುಭವ ಮಾಡಿಸುವುದೇ ಪ್ರಕಾಶಕರ ಉದಾತ್ತ ಕಾರ್ಯವಾಗಿದೆ. ಪ್ರಸ್ತುತ ಕಥಾ ಸಂಗ್ರಹವನ್ನು ಕನ್ನಡ ರಸಿಕರಿಗೆ ನೀಡಿ, ಶಾರದೋಪಾಸನೆಯ ಪವಿತ್ರ ಕರ್ತವ್ಯವನ್ನು ಶ್ರೇಷ್ಠ ರೀತಿಯಲ್ಲಿ ಜರುಗಿಸುತ್ತಿರುವೆನೆಂದು ವಿಶ್ವಾಸದಿಂದ ಹೇಳಬಲ್ಲೆನು.

ನಿಃಸ್ಪಂದ-ನಿಸ್ತರಂಗ ಮನಃಸ್ಥಿತಿಯಲ್ಲಿ ಬರುವ ಅತಿ ಸೂಕ್ಷ್ಮಾನುಭವಗಳಿಗೆ ವೇಷಭೂಷೆ ತೊಡಿಸಿ, ಅವು ಲೌಕಿಕ ಜಗತ್ತಿನಲ್ಲಿ ಸ್ವಾಭಾವಿಕವೂ ಸುಮನೋಹರವೂ ಆಗುವ ರೀತಿಯಲ್ಲಿ ನಡೆನುಡಿಯುವಂತೆ ಮಾಡುವ ಕಲಾಕೌಶಲ್ಯವು ಈ ಕಥೆಗಳಲ್ಲಿ ಅಡಿಗಡಿಗೆ ಕಾಣದಿರದು. ಅಣ್ಣ ಬೇಂದ್ರೆಯವರು ತಮ್ಮ ಮುನ್ನುಡಿಯಲ್ಲಿ ಈ ಅಂಶವನ್ನು ಸೂಕ್ಷ್ಮವಾಗಿ ವಿಶದಪಡಿಸಿಯೆ ಇದ್ದಾರೆ.

ನನ್ನ ಜೊತೆಗಾತಿ ಪ್ರಭುದಾಸಿ ನಿವೇದಿತಾ ಅವರು ನನ್ನ ಲೌಕಿಕ ಜೀವನಕ್ಕೂ ಆಧ್ಯಾತ್ಮಿಕ ಒಪ್ಪ ಕೊಟ್ಟು, ನಿರಾಮಯ ಶಾಂತಿಯ ದಾರಿ ತೆರೆಯುವಂತೆ ಸ್ಫೂರ್ತಿಯಿತ್ತಿರುವರೆಂದು ಇಲ್ಲಿ ಹೇಳದಿರಲಾರೆನು.

'ಪ್ರದೀಪ' ಮಾಸಪತ್ರಿಕೆಗೆಂದು ಪ್ರತಿತಿಂಗಳು ಬರೆದ ಎಂಟು ಕಥೆಗಳನ್ನು ಪೋಣಿಸಿ ಇಲ್ಲಿ ಕೊಡಲಾಗಿದೆ. ಈ ಕಥಾಸಾಹಿತ್ಯವು ಇನ್ನೂ ಬೆಳೆಯುತ್ತಲೇ ಇರುವುದು. ಇದೇ

ಬಗೆಯ ಇನ್ನೊಂದು ಕಥಾಸಂಗ್ರಹವು ಬೇಗನೆ ಪ್ರಕಟವಾಗುವ ನಿರೀಕ್ಷೆಯಿದೆ.

ಮೂಲ ಮರಾಠಿ ಕೃತಿಗಳಲ್ಲಿ ಒಂದಿನಿಸೂ ಬದಲಾವಣೆ ಮಾಡದೆ, ಕನ್ನಡದ ಛಂದ-ಚೆಂದಗಳಿಗೆ ಹೊಂದಿಕೆಯಾಗುವಂತೆ ಅನುವಾದಿಸಲು ಇಲ್ಲಿ ತುಂಬ ಆಸ್ಥೆಯಿಂದ ಪ್ರಯತ್ನಿಸಲಾಗಿದೆ.

ಈ ಕಥಾಸಂಗ್ರಹವನ್ನು ಕನ್ನಡದ ರಸಜ್ಞ ಜನತೆ ಪ್ರೀತಿಯಿಂದ ಬರಮಾಡಿಕೊಳ್ಳುವುದೆಂದು ನಂಬಿಕೆಯಿದೆ.

**ಧಾರವಾಡ**

ವಿಜಯಾದಶಮಿ — **ವಿನೀತ ರಾಮಚಂದ್ರರಾಯ**

೧೪-೧೦-೧೯೫೭

# ಪರಿವಿಡಿ



# ● ● ಕಾಣದ ಪ್ರಾಣೇಶ್ವರ

ನಾವು ಬದ್ಧರು ಎಂತಾದೆವು, ಎಂದು, ಎಲ್ಲಿ ಎಂಬುದರ ಕಲ್ಪನೆಯೇ ನನಗಿಲ್ಲ; ಆದರೂ ನಾವು ಪ್ರೇಮಬದ್ಧರಾದೆವೆಂಬುದು ತುಂಬಾ ನಿಜ. ನಾನಿನ್ನೂ ಚಿಕ್ಕವಳು-ಅಪ್ರಬುದ್ಧಳು, ಆಗಲೂ ಅವನ ಪ್ರೇಮವು ನನ್ನ ಮೇಲಿದ್ದಿತು. ಆತನು ನನಗೆಂದೂ ಬೆಟ್ಟಿಯಾಗಲಿಲ್ಲ, ಎಂದೂ ನನ್ನನ್ನು ಮಾತನಾಡಿಸಲಿಲ್ಲ; ಆದರೂ ನನ್ನನ್ನೆಂದೂ ಅಗಲಿ ಇರಲಿಲ್ಲ. ಅರೆಕ್ಷಣ ಕೂಡ ನನ್ನಿಂದ ದೂರ ಇರುವದಿಲ್ಲ ಎಂಬುದು ನನಗೆ ತಿಳಿಯತೊಡಗಿದಂತೆ, ನನ್ನ ಮನಸ್ಸು ಆತನಲ್ಲಿಯೇ ನೆಟ್ಟಿತು. ಈಚೆಗಂತೂ ಆತನ ಹೊರತು ಬೇರೆ ಯೋಚನೆಗಳೇ ನನಗೆ ಬಾರವು. ಮನದಲ್ಲಿ-ಧ್ಯಾನದಲ್ಲಿ-ಸ್ವಪ್ನದಲ್ಲಿ ಆತನದೇ ಚಿಂತನ; ಎಚ್ಚರ-ನಿದ್ದೆಗಳಲ್ಲಿಯೂ ಆತನದೇ ಸ್ಮರಣ. ನನ್ನ ಮೇಲಿನ ಆತನ ಪ್ರೇಮವು ಅಕೃತ್ರಿಮವಾಗಿತ್ತು; ಅದುವೇ ನನ್ನ ಪ್ರೇಮವನ್ನು ಮುಂದಮುಂದಕ್ಕೊಯ್ಯುತ್ತಿತ್ತು. ಆ ಪ್ರೇಮವೆಂದರೆ ಅವಕ್ಕೆ ಉಪಮೆಯೇ ಇಲ್ಲ! ನಮ್ಮ ಪ್ರೇಮಕ್ಕೆ ಬೆಲೆಯೇ ಇಲ್ಲ, ಸೀಮೆಯೇ ಇಲ್ಲ! ಆತನೆಂದರೆ ನನ್ನ ಜೀವಿತ, ನಾನೆಂದರೆ ಆತನ ಅಸ್ತಿತ್ವಕ್ಕೆ ಸಾಕ್ಷಿ— ಈ ವಿಚಾರದಿಂದ ನನ್ನ ಕಣ್ಣಿಗೂ ಪ್ರೇಮದಿಂದ ಮಬ್ಬು ಬಂದಿತ್ತು; ಮನಸ್ಸೂ ಮಂತ್ರಮುಗ್ಧವಾದಂತಿತ್ತು.

ಸೂರ್ಯೋದಯವಾಗಿತ್ತು. ಸೂರ್ಯಕಿರಣಗಳು ಸುತ್ತೆಲ್ಲ ಪಸರಿಸಿದ್ದವು. ಸುವರ್ಣಪ್ರಭೆಯಿಂದ ಸುಶೋಭಿತವಾದ

ಗಗನಮಂಡಲವನ್ನು ನೋಡು ಬಾ ಎನ್ನುತ್ತ ಸೂರ್ಯರಶ್ಮಿಗಳು ಕಾಚಿನ ಕಿಟಕಿಯೊಳಗಿಂದ ನನ್ನ ಕೋಣೆಯೊಳಕ್ಕೆ ಹೊಕ್ಕವು. ನಿರ್ಜೀವ ಕಾಚು ಆ ಕಿರಣಗಳನ್ನೆಂತು ತಡೆದೀತು? ನಾನು ಎಚ್ಚರವಾಗಿಯೇ ಇದ್ದೆ; ಕಿರಣಗಳು ಬಂದೊಡನೆ ನಾನು ನನ್ನ ಕಣ್ಣುಗಳನ್ನು ಮತ್ತಿಷ್ಟು ಗಟ್ಟಿಯಾಗಿ ಮುಚ್ಚಿಕೊಂಡೆ. ನನ್ನ ಏಕತಾನತೆಗೆ ಭಂಗ ಬರಬಾರದೆಂದು ಕುತ್ತಿಗೆಯವರೆಗಿನ ಹೆಚ್ಚಡವನ್ನು ಕಣ್ಣಿನಮೇಲೂ ಎಳೆದುಕೊಂಡೆನು. ಆವನ ಸ್ಮರಣ-ಆವನ ಯೋಚನೆ-ಆವನ ಕಲ್ಪನಾತರಂಗಗಳಲ್ಲಿಯೇ ನಾನೊಂದು ತರಂಗವಾಗಿ ತೇಲುತ್ತಿದ್ದೆ. ಒಳಗಿನಿಂದ ತಾಯಿಯ ಕರೆ ಕೇಳಬಂದು ನಾನು ವಿಚಾರತಂದ್ರೆಯಿಂದ ಎಚ್ಚರವಾದೆ. ಎದ್ದು ಕಿಟಕಿ ತೆರೆದೆ; ಅಲ್ಲಿಂದ ಕಾಣುವ ರಮಣೀಯ ದೃಶ್ಯವು ನನ್ನ ಕಾಲು ಕೀಳಗೊಡಲಿಲ್ಲ.

ಆ ರಮ್ಯ ಪ್ರೇಮಮಾಧುರಿಯನ್ನು ನೋಡುತ್ತ ನನ್ನ ಮನಸ್ಸು ನನ್ನ ಪ್ರೇಮದೊಡನೆ ಅದರ ತುಲನೆ ಮಾಡತೊಡಗಿತು. ಗಗನಮಂಡಲದಲ್ಲಿರುವ ದಿನಕರನು ತನ್ನ ಭವ್ಯಕರಗಳಿಂದ ಭೂದೇವಿಯನ್ನು ಆಲಿಂಗಿಸಿದನು— ಎಷ್ಟು ದಿವ್ಯವೀ ಆಲಿಂಗನ ! ಆದರೆ ಛೆ !— ಆತ ನನ್ನಿಂದ ದೂರ ಗಗನದಲ್ಲಿಲ್ಲ; ಕೊಡ ಹಾಗೂ ಅದರೊಳಗಿನ ನೀರು ಎಂತೋ ಹಾಗೆ ಆತನೂ ನಾನೂ ! ನಮ್ಮ ಆಲಿಂಗನವು ಅಂತು ಅಖಂಡವಾಗಿದೆ !! ಸೂರ್ಯರಶ್ಮಿಗಳು ಸುಕೋಮಲ ಸುಮಗಳನ್ನು ಚುಂಬಿಸಿದವು— ಎಷ್ಟು ನಿಷ್ಪಾಪವೀ ಚುಂಬನ ! ಆದರೆ ಛೆ !— ಮಾತೆಯ ಚುಂಬನಕ್ಕಿಂತಲೂ ಸವಿ ಹಾಗೂ ನಿರ್ವಿಕಾರವಾಗಿದೆ ಆತನ ಚುಂಬನ ! ತನ್ನ ಕೋಮಲ ಕರಗಳಿಂದ ತರುವನ್ನು ಬಾಹುಪಾಶದಲ್ಲಿ ಬಿಗಿಯುವ ವಲ್ಲರಿಯ ಜೀವನ ಎಷ್ಟು ಸುಖ

ಮಯ ! ಆದರೆ ಛೆ !— ಚಂದ್ರ-ಚಂದ್ರಿಕೆಯರಂತೆ ಅಭೇದ್ಯವಾಗಿದೆ ನಮ್ಮ ಬಾಳು ! ಪುಷ್ಪ–ಪರಿಮಳಗಳ ಜೊತೆ ಎಷ್ಟು ವಿಶುದ್ಧ! ಆದರೆ ಛೆ !— ಸಕ್ಕರೆ ಹಾಗೂ ಸವಿಗಳಂತೆ ನಮ್ಮ ಜೋಡಿ. ಸರಿತ್ತು-ಸಮೀರರ ಸಖ್ಯವೆಷ್ಟು ಗಾಢ ! ಆದರೆ ಛೆ !— ಆಕೃತಿ–ಛಾಯೆಗಳಂತೆ ತಮ್ಮ ಸಖ್ಯ ಅನ್ಯೋನ್ಯ ! ಪರ್ಣ–ವರ್ಣಗಳ ಐಕ್ಯವೆಷ್ಟು ರಮಣೀಯ ! ಆದರೆ ಛೆ!— ಜ್ಯೋತಿ–ಪ್ರಭೆಗಳಂತೆ ನಮ್ಮಿರ್ವರ ಐಕ್ಯ!....

ಇಷ್ಟರಲ್ಲಿ ನನ್ನ ತಾಯಿ ಕೋಣೆಯೊಳಕ್ಕೆ ಬಂದಳು. ನಮ್ಮ ಪ್ರೇಮದ ತುಲನೆ ಇನ್ನೂ ಮುಗಿದಿರಲಿಲ್ಲ; ಅಷ್ಟರಲ್ಲಿ ತುಲನೆಯ ತಕ್ಕಡಿಯನ್ನು ಕೆಳಗಿರಿಸಬೇಕಾಯಿತು. ಗೊತ್ತಾದ ಹೊತ್ತಿಗೆ ಎಲ್ಲರೊಡನೆ ನಾನೂ ದುಗ್ಧಪಾನಕ್ಕೆ ಕುಳಿತೆ. ಬೆಳ್ಳಿಯ ಬೆಳ್ಳನ್ನ ಬಟ್ಟಲಿನಲ್ಲಿ ಬೆಳ್ಳಗಿನ ನೊರೆವಾಲು. ಬಟ್ಟಲೆತ್ತಿ ಬಾಯಿಗೆ ಹಚ್ಚಿದೆ. ಎದುರಿಗೆ ಟಿಕ್ ಟಿಕ್ ಎನ್ನುವ ಗಡಿಯಾರದ ಕಡೆಗೆ ನನ್ನ ಗಮನ ಹೋಯಿತು. ತಾಸಿನ ಮುಳ್ಳಿನ ಗತಿ ಅತಿ ಮಂದ; ಮಿನಿಟಿನ ಮುಳ್ಳಿನದು ತುಂಬಾ ಒತ್ತರ. ತಾಸು–ಮಿನಿಟು ಕಾಲದರ್ಶಕ ಅಂತರಗಳೇ ಅಲ್ಲವೆ? ತಾಸು–ಮಿನಿಟು ಒಂದೇ ಜಾತಿಯವು— ಎರಡರಲ್ಲಿಯೂ ಐಕ್ಯವಿದೆ; ಆದರೆ ನಮ್ಮದು ಹಾಗಲ್ಲ; ನಮಗೆ ಸ್ವತಂತ್ರ ಅಸ್ತಿತ್ವವೇ ಇಲ್ಲ. ಆತನ ಹೊರತು ನನಗೆ ಜೀವಿತವಿಲ್ಲ; ನನ್ನ ಹೊರತು ಆತನಿಗೆ ವ್ಯಕ್ತವಾಗಲು ಸಾಧನವಿಲ್ಲ.

ಎಲ್ಲರೂ ಎದ್ದರೆಂದು ನಾನೂ ಎದ್ದೆ. ನಾನೇನನ್ನೋ ಸೇವಿಸಿದೆನಿಷ್ಟೇ! ರಸನೆಗೆ ರುಚಿಜ್ಞಾನವಾಗುವಷ್ಟೂ ನನ್ನ ಮನಸ್ಸು ರಸನೆಯೊಡನೆ ಸಂಲಗ್ನವಾಗಿರಲಿಲ್ಲ. ನನ್ನ ಕೋಣೆಯೊಳಕ್ಕೆ ಬಂದು ಕಿಟಕಿಯ ಬಳಿ ನಿಂತೆ. ದೂರ ಹರಿಯುವ

ತೊರೆಯ ಪ್ರವಾಹವು ನನಗೆ ಕಾಣುತ್ತಿತ್ತು. ಉಲ್ಲಾಸದಿಂದ, ಹಸನ್ಮುಖತೆಯಿಂದ, ವಿನಯಶೀಲತೆಯಿಂದ, ತ್ವರಿತ ಗತಿಯಿಂದ ಆ ತರಂಗಿಣಿ ನಲ್ಲನ ಬೆಟ್ಟಿಗಾಗಿ ಹರಿಯುತ್ತಿದ್ದಳು. ನಲ್ಲನ ಬೆಟ್ಟಿಯ ಸಂಕಲ್ಪದಿಂದಲೇ ಅವಳು ಹರಿಯುತ್ತಿದ್ದಳು. ದೃಢನಿಶ್ಚಯದಿಂದ, ಪರಮ ವಿಶ್ವಾಸದಿಂದ ಮಾರ್ಗಕ್ರಮಣವನ್ನು ಮಾಡುತ್ತಿದ್ದಳು. ಪ್ರಿಯನ ದರ್ಶನಕ್ಕಾಗಿ ಅವ್ಯಾಹತವಾಗಿ ಹರಿಯುವ ತರಂಗಿಣಿಯನ್ನು ನೋಡಿ, ನನ್ನ ಪ್ರಾಣ-ನಾಥನ ಸ್ಮರಣವಾಗಿ ಪ್ರೇಮವಿಹ್ವಲಳಾದೆ.

ತಂಗಾಳಿ ತೀಡುತ್ತಿತ್ತು. ಗಿಡಗಳು ಅಲ್ಲಾಡುತ್ತಿದ್ದವು. ಕುಸುಮಗಳು ಕುಣಿದಾಡುತ್ತಿದ್ದವು. ನನ್ನ ಲಕ್ಷ್ಯಮಾತ್ರ ಆದಾವಕಡೆಗೂ ಇರಲಿಲ್ಲ. ನಮ್ಮ ಪ್ರೇಮವನ್ನು ತೂಗಲು ತಕ್ಕುದಾದ ತಕ್ಕಡಿಯೇ ಇಲ್ಲ; ಅಖಿಲ ವಿಶ್ವದಲ್ಲಿಯೇ ಅಂತಹ ವಸ್ತುವಿಲ್ಲ. ನನ್ನ ಮನಸ್ಸು ಶೂನ್ಯವಾಯಿತು. ತಿಳಿನೀರಿನಲ್ಲಿಯ ಪ್ರತಿಬಿಂಬವನ್ನು ನೋಡಬೇಕೆನ್ನುವಷ್ಟರಲ್ಲಿ ನಳನಳಿಸುವ ಹೂ ಅಡ್ಡ ಬಂದಂತೆ ನನಗನಿಸಿತು. ಜೀವನದಲ್ಲಿ ಏನೋ ಕೊರತೆ ಅನಿಸತೊಡಗಿತು. ಸುಕೋಮಲಸುಮಗಳ ಮಾಲೆ ಮಾಡಿ ಪೂಜೆಯ ಪ್ರತೀಕಕ್ಕೆ ಅರ್ಪಿಸಹೋದಾಗ ಅದು ಕಿರಿದಾಗಿ ಸಾಲದಾದರೆ ಹೇಗಾಗುವದೋ ಹಾಗೆ ನನ್ನ ಮನಸ್ಸಿಗಾಯಿತು. ನಾನು ಅಸ್ವಸ್ಥಳಾದೆನು. ಶೂನ್ಯಮನದಿಂದ ಕಿಟಕಿಯ ಹೊರಗಿನ ದೃಶ್ಯದತ್ತ, ಕಾಗೆ ಕಣ್ಣು ತಿರುವುತ್ತ, ಗೋಣು ಒಮ್ಮೆಲೆ ಹೊರಳಿಸಿ ನೋಡುವಂತೆ ದೃಷ್ಟಿ ಬೀರಿದೆ. ನೀರನ್ನಗಲಿದ ಮೀನಿನಂತೆ, ಪ್ರಾಣವಿಲ್ಲದ ತನುವಿನಂತೆ, ದೇವನಿಂದ ದೂರನಾದ ಭಕ್ತನಂತೆ, ವಿಮಲಚರಣಗಳಿ-ಗೆರವಾದ ಪುಷ್ಪದಂತೆ, ಪ್ರೇಮರಹಿತ ಮಾನವನಂತೆ ನನಗನಿ

ಸಿತು. ಈ ಶೂನ್ಯ ಮನಸ್ಸು ನನ್ನನ್ನು ದೂರ ದೂರ ಒಯ್ದಿತು, ಹಿಂದೆ ಹಿಂದೆ ಜಗ್ಗಿತು, ಭೂತಕಾಲದತ್ತ ಸೆಳೆದೊಯ್ದಿತು.

ನನಗೆ ಚಿಕ್ಕಂದಿನಲ್ಲಿ ನಡೆದ ಘಟನೆಯೊಂದು ನೆನಪಾಯಿತು. ನಮ್ಮ ಅಜ್ಜಿ ನಮಗೆ ಪ್ರತಿದಿನ ಕತೆ ಹೇಳುತ್ತಿದ್ದಳು. ನಮ್ಮ ಪೂರ್ವಜರು ಹಲವು ಹೊತ್ತಿಗೆಗಳನ್ನು ಬರೆದಿಟ್ಟಿದ್ದರಂತೆ. ಅವುಗಳಲ್ಲಿ ರಮ್ಯಕಥೆ, ಚರಿತ್ರೆ, ಚಾರಿತ್ರ್ಯ-ನಿಯಮಧರ್ಮ-ಆರೋಗ್ಯ-ಸಾಮರ್ಥ್ಯಗಳನ್ನು ಗಳಿಸುವ ಉಪಾಯ ಮೊದಲಾದುವನ್ನು ಅವರು ತಮ್ಮ ವಂಶಜರಿಗಾಗಿ ಬರೆದಿಟ್ಟಿದ್ದರಂತೆ. ಆ ಕಥೆಗಳನ್ನೇ ನಮ್ಮಜ್ಜಿ ನಮಗೆ ಹೇಳುತ್ತಿದ್ದಳು. ಒಂದು ದಿನ ಅವಳು ಕಥೆ ಹೇಳಹತ್ತಿದಳು— "ಅಮರಪುರಿ ಎಂಬುದೊಂದು ನಗರವಿದೆ. ಅದು ನೀರಿನಮೇಲೆ ನೆಲಸಿದ್ದು, ಸುತ್ತೂಮುತ್ತೂ ನೀರೇ ನೀರು. ಅಮರಪುರಿಯಲ್ಲಿ ಪುರುಷೋತ್ತಮನ ಅಪ್ರತಿಮ ಮಂದಿರವಿದೆ. ಅಲ್ಲಿ ಅಮೃತದ ಝರಿಯಿದೆ. ಅಲ್ಲಿ ಶಾಂತಿಯ ಮಳೆ ಬೀಳುವದು. ಆರೋಗ್ಯದ ಉಪವನಗಳು ಶೋಭಿಸುವವು. ಸೌಖ್ಯದ ಪುಷ್ಪಗಳು ಅರಳುವವು. ವಾತಾವರಣವೆಲ್ಲ ಪ್ರೇಮದ ಪರಿಮಳದಿಂದ ಇಡುಗಿರುವುದು. ಅಲ್ಲಿ ಶತ್ರುತ್ವವಿಲ್ಲ ವೈಗುಳ-ಬಡಿದಾಟಗಳಿಲ್ಲ. ದುಃಖ-ದಾರಿದ್ರ್ಯಗಳಿಲ್ಲ. ಅದೇಕೆ ಮೃತ್ಯು ಕೂಡ ಅಲ್ಲಿಲ್ಲ. ಮತ್ತೆ, ಅಲ್ಲಿಯ ತರುಲತೆಗಳು ಮಾತನಾಡುವವು, ಹೂಗಳು ಮುಗುಳುನಗೆ ಬೀರುವವು, ಮಾರುತನು ಹಾಡುವನು, ಸೃಷ್ಟಿಯು ನರ್ತಿಸುವಳು. ಅಲ್ಲಿ ತೃಷಿತರಿಗೆ, ಕ್ಷುಧಿತರಿಗೆ ಅಮೃತದ ಊಟ." ನಾನು ಕೇಳಿದೆ— "ಅಜ್ಜೀ, ಅಮರಪುರಿಯಲ್ಲಿ ನಿಜವಾಗಿಯೂ ಯಾರೂ ಸಾಯುವುದಿಲ್ಲವೇ ?" "ಇಲ್ಲ" ಎಂದು ಅಜ್ಜಿ ಉತ್ತರಿಸಿದಳು.

ಮರಣವೆಂದರೇನು ನನಗೆ ಗೊತ್ತಿರಲಿಲ್ಲ. ಒಮ್ಮೆ ನಮ್ಮ

ಬೆಕ್ಕಿನ ಮರಿಗಳು ಎತ್ತೆತ್ತಲೋ ಓಡಿಹೋದವು, ಅವುಗಳ ಲ್ಲೊಂದು ಸಿಕ್ಕಲೇ ಇಲ್ಲ. ಮರುದಿನ ಹಿತ್ತಲಕೋಣೆಯಲ್ಲಿ ಅದು ಬಿದ್ದುಬಿಟ್ಟುದು ಕಂಡುಬಂದಿತು. ನಾನದನ್ನು ಅಲ್ಲಾಡಿಸಿ, ಮೈಮೇಲೆ ಕೈಯಾಡಿಸಿ ತಕ್ಕೈಸಿದೆ— ಅದೇನೂ ಕಣ್ಣು ತೆರೆಯಲಿಲ್ಲ. ಗೋಣು ಜೋತುಬಿದ್ದಿತ್ತು, ಮರಿಗೇ ಅದನ್ನು ಎತ್ತಲಾಗಲಿಲ್ಲ. ಹಸಿವಾಗಿರಬಹುದೆಂದು ಅದರ ಬಾಯಲ್ಲಿ ಹಾಲು ಹಾಕಿದೆ— ಆದರೂ ಬಾಯಿ ತೆರೆಯಲಿಲ್ಲ. ಅಜ್ಜಿಯನ್ನು ಕರೆತಂದು ತೋರಿಸಿದೆ. ಅವಳಂದಳು— "ಹುಚ್ಚೀ, ಆ ಬೆಕ್ಕಿನ ಮರಿ ಸತ್ತುಹೋಗಿದೆ." ನಾನೆಂದೆ—"ಸತ್ತರೆ ಸತ್ತುಹೋಗಲಿ, ಆದರೆ ಸ್ವಲ್ಪ ಕಣ್ಣು ತೆರೆಯಬಾರದೇಕೆ ? ಸ್ವಲ್ಪ ಹಾಲು ಕುಡಿದು ಆಮೇಲೆ ಬೇಕಾದರೆ ಸಾಯಲಿ." ನನಗನಿಸಿತು— ಕೈಕಾಲು ಅಲ್ಲಾಡಿಸದೆ ಕಣ್ಣುಮುಚ್ಚಿಕೊಂಡು ಸುಮ್ಮನೆ ಬಿದ್ದುಬಿಟ್ಟು, ಮುಂದೆ ಬೇಕಾದಾಗ ಎದ್ದುಬಿಡುವದೆಂದರೇ ಮರಣ. ಅಜ್ಜಿಯೆಂದಳು— "ಅದು ಕಣ್ಣು ತೆರೆಯಲಾರದು, ಹಾಲೂ ಕುಡಿಯಲಾರದು." ನಾನೆಂದೆ— "ಹೀಗೇಕೆ ಹಟ ಮಾಡಬೇಕು ಅದು ?" ಅಜ್ಜಿಯೆಂದಳು— "ಮಗೂ, ಇದು ಹಟವಲ್ಲ. ಅದರ ಪ್ರಾಣ ಹೊರಟುಹೋಗಿದೆ. ಅದು ಸತ್ತಿದೆ." ನಾನು ಕೇಳಿದೆ— "ಪ್ರಾಣವೆಂದರೇನು ? " ಅಜ್ಜಿ ಸ್ತಬ್ಧ ಳಾಗಿದ್ದುಬಿಟ್ಟಳು. ನಾನು ಸುಮ್ಮನೆ ಕೂಡಲೇ ಇಲ್ಲ. ಮತ್ತೆ ಮತ್ತೆ ಕೇಳಿದೆ—"ಪ್ರಾಣ ಎಂದರೆ ಏನು?" ಅಜ್ಜಿ ಹೇಳಿದಳು— "ಪ್ರಾಣ ಎಂದರೆ ವಾಯು." ನಾನೆಂದೆ—"ಇದರ ಕಿವಿಯಲ್ಲಿ ವಾಯು ಊದಿದರೆ........" ಮುಂಗಾಣದೆ ಅಜ್ಜಿಯೆಂದಳು— "ಮಗೂ, ಹೋದ ಪ್ರಾಣ ಮರಳಿ ಹೇಗೆ ಬಂದೀತು?"........ "ಶಿವ! ಶಿವ !" ಎಂದು ಪಟಗುಟ್ಟುತ್ತ ಅಜ್ಜಿ ಮನೆಯೊಳಕ್ಕೆ

ಹೊರಟುಹೋದಳು. ಅಜ್ಜಿ ನನಗೆ ಪರಿಪರಿಯಿಂದ ತಿಳಿಸಿ ಹೇಳಿದರೂ ನನಗೇನೂ ತಿಳಿಯಲಿಲ್ಲ. ಬೆಕ್ಕು ಜಿಗಿದಾಡುವಾಗ ಅದರ ಕಾಲು, ಕಿವಿ, ಮೂಗು, ಕಣ್ಣು, ಬಾಲ, ಹೊಟ್ಟೆ, ಬೆನ್ನು ಹೇಗಿದ್ದವೋ ಹಾಗೇ ಈಗಲೂ ಇದ್ದವು. ಅಂದಮೇಲೆ ಬೆಕ್ಕು ಸತ್ತಿತು ಹೇಗೆ ? ನಾನು ಹಿತ್ತಲಬಾಗಿಲ ಹೊರಗಿನ ಸೂರಿನ ಕೆಳಗೆ ಗೋಣಿತಟ್ಟು ಹಾಸಿ, ಅದರಮೇಲೆ ಬೆಕ್ಕಿನ ಮರಿಯನ್ನು ಮಲಗಿಸಿದೆ. ಗೋಣಿತಟ್ಟನ್ನೇ ಅದರ ಮೇಲೆ ಹೊದಿಸಿದೆ. ಸತ್ತು ಕೆಲ ಹೊತ್ತಿನಮೇಲೆ ಎದ್ದಿತೆಂದರೆ ಹಾಲು ಕುಡಿಯಲು ದೊರೆಯಲೆಂದು ಅದರ ಹಾಸಿಗೆಯ ಹತ್ತಿರವೇ ತಲೆಗೆ ಆನಿಸಿ ಹಾಲಿನ ಬಟ್ಟಲನ್ನಿಟ್ಟೆ. ಮರಳಿ ಆಟದಲ್ಲಿ ತೊಡಗಿ, ನನ್ನ ಕಿರುಸಂಸಾರದಲ್ಲಿ ಮಗ್ನಳಾಗಿಹೋದೆ. ಮರು ದಿನ ಮುಂಜಾನೆ ಬೆಕ್ಕಿನಮರಿ ಸತ್ತು ಎದ್ದುಬಿಟ್ಟಿರಬಹುದೆಂದು ಓಡುತ್ತ ಹೋದೆ.... ಅದರ ಮೈಯ ಮಿದುತನವೆಲ್ಲ ಹೊರಟು ಹೋಗಿತ್ತು, ಅದು ಕಾಷ್ಠದಂತೆ ಬಿದ್ದಿತ್ತು, ಇರುವೆ ನೊಣ ಅದರ ಸುತ್ತು ಮುಕುರಿದ್ದವು.

ಒಂದುದಿನ ನಮ್ಮ 'ಮೋತ್ಯಾ' ನಾಯಿ ಸತ್ತು ಹೋಯಿತು, ಹಾಗೆಯೆ 'ರಘು'— ಸಾಕಿದ ಗಿಳಿಯೂ ಸತ್ತು ಹೋಯಿತು. ಎಲ್ಲರೂ ಅನ್ನುತ್ತಿದ್ದರೆಂದು ನಾನೂ ಅನ್ನುತ್ತಿದ್ದೆ— ಅವು ಸತ್ತ ವೆಂದು. ಆದರೆ ಸಾಯುವದೆಂದರೇನು ನನಗೆ ತಿಳಿಯಲಿಲ್ಲ. ಸತ್ತುಹೋದ ಬೆಕ್ಕು ನೋಡಿ ಮನಸ್ಸಿಗೆ ಅದೊಂದು ಬಗೆಯ ಹಳಹಂಡ ಅನಿಸತೊಡಗಿತು. ನಾನು ಅಜ್ಜಿಯಬಳಿ ಹೋಗಿ ಕೇಳಿದೆ— "ಅಜ್ಜೀ, ಬೆಕ್ಕು ನಾಯಿ ಸತ್ತುಹೋದಂತೆ ಮನು ಷ್ಯರೂ ಸಾಯುತ್ತಾರೆಯೇ?" ಅಜ್ಜಿ ನನ್ನನ್ನು ತಬ್ಬಿಕೊಂಡು, ಮುದ್ದಿಟ್ಟು, ಅಕ್ಕರೆಯಿಂದ "ಮನುಷ್ಯರು ಸಾಯುವದಿಲ್ಲ"

ಎಂದು ಹೇಳಬೇಕೆಂದು ನನಗೆ ಅನಿಸಿತು. ಅವಳೇನು ಅನ್ನು ತ್ತಾಳೆ ಎಂದು ಕಿವಿ ನಿಗುರಿಸಿ ಕೇಳಿದೆ. ಅಜ್ಜಿ ಅಂದಳು— "ಹೌದು. ಮನುಷ್ಯರೂ ಸಾಯುತ್ತಾರೆ. ಹುಟ್ಟಿಬಂದವರೆಲ್ಲ ಮೃತ್ಯುಮುಖದಲ್ಲಿ ಬೀಳಲೇಬೇಕು...." ಅಜ್ಜಿಯ ಮಾತು ಇನ್ನೂ ಮುಗಿದಿರಲಿಲ್ಲ—ನಾನು ತವಕದಿಂದ ಕೇಳಿದೆ—"ಅಜ್ಜೀ, ಅಮರಪುರಿಗೆ ಹೇಗೆ ಹೋಗುವುದು, ಎಲ್ಲಿ ಇಳಿಯುವುದು, ಯಾವಲ್ಲಿಗೆ ತಿಕೀಟು ತೆಗೆಯುವುದು— ಹೇಳು !" ಅಜ್ಜಿ ಯೆಂದಳು— "ಮಗೂ, ನಮ್ಮ ಊರಿನ ಸುತ್ತು ಭದ್ರವಾದ ಕೋಟೆಯಿದೆ. ಅದಕ್ಕೊಂದೇ ಬಾಗಿಲಿದೆ. ಊರಿನ ಹೊರ-ವಲಯದಲ್ಲಿ 'ಮೋಹನವನ'ವೆಂಬ ಉದ್ಯಾನವಿವೆ. ದಾರಿ-ಹೋಕರು ಅಲ್ಲಿಯ ತರುಲತೆಗಳನ್ನು ನೋಡುತ್ತ ಮೈಮರೆತು ಮರುಳಾಗಿ ನಿಲ್ಲುವರು. ಅಲ್ಲಿಯ ಹಕ್ಕಿಪಕ್ಕಿಗಳು ಅವರನ್ನು ಮೋಹಗೊಳಿಸುವವು. ಅಲ್ಲಿಯ ಮಂದಮಾರುತನ ತೀಟದಿಂದ ಅವರು ಮದವೇರುವರು; ಹಾಗೂ ಮುಂದಿನ ದಾರಿಯನ್ನೇ ಮರೆತುಬಿಡುವರು. ಈ ಉಪವನಕ್ಕೆ ಹತ್ತಿ ಧನದೌಲತ್ತಿನ ಕೊತ್ತಳಗಳಿವೆ. ಅವುಗಳನ್ನು ದಾಟಿದ ಮೇಲೆ ಬಟ್ಟಬಯಲು ಹತ್ತುವುದು. ಆದರೆ ದೌಲತ್ತಿನ ಕೊತ್ತಳಗಳನ್ನು ದಾಟಿ-ಹೋಗಬೇಕೆನ್ನುವವರೇ ವಿರಲ. ಆ ಬಯಲಿನಲ್ಲಿ ಒಂದು ಹೆಮ್ಮರವಿದೆ. ಅದರ ಮೇಲೆ ಬಗೆಬಗೆಯ ಹಕ್ಕಿಗಳಿವೆ. ಅದರ ಶೀತಲಛಾಯೆಯಲ್ಲಿ ವಿಶ್ರಾಂತಿ ಪಡೆದು ಪಯಣಿಗರು ಮುಂದೆ ಹೋಗುವರು. ಬಗೆಬಗೆಯ ಗಿಡಬಳ್ಳಿ ಮುಗಿಲು ಮುತ್ತಿಡು ವಂತೆ ಅಲ್ಲಿ ಬೆಳೆದಿವೆ. ದಟ್ಟಡವಿಯೊಳಗಿನಿಂದ ಒಬ್ಬೊಂಟಿಗ ರಾಗಿ ಹೊರಟಂತೆ ಅಲ್ಲಿ ಅನಿಸುವದು; ಆದರೆ ಹಿಂಸ್ರಪಶುಗಳ ಭೀತಿಯಿಲ್ಲ. ಸ್ವಲ್ಪ ಮುಂದೆ ಹೋದಮೇಲೆ ಸೂರ್ಯರಶ್ಮಿ

ಗಳು ಕಾಣಹತ್ತುವವು; ಹವೆಯಲ್ಲಿ ಉಷ್ಣತೆ ಅನ್ನಿಸುವುದು; ಆದರೆ ಅಲ್ಲಲ್ಲಿ ತಣ್ಣೆರಳಿದೆ. ಹಗಲ ಪಯಣದ ತರುವಾಯ ಬೆಳದಿಂಗಳಲ್ಲಿ ಸುಖಪ್ರವಾಸ. ಚಂದ್ರನ ಶೀತಲ ಕಿರಣಗಳು ದಾರಿತುಂಬ ಚೆಲ್ಲಿರುತ್ತವೆ. ಮುತ್ತುಮಾಣಿಕಗಳ ತಳಿ ಹಾಕಿರುತ್ತದೆ. ಪಕ್ಷಿಯು ಗಿಡಬಳ್ಳಿ ತೂಗುತ್ತಿವೆ. ಹೊಂದೆನೆ ಗಳು ತೊನೆಯುತ್ತಿವೆ. ಎಣ್ಣೆಯಿಲ್ಲದೆ ಜ್ಯೋತಿ ಉರಿಯುತ್ತಿವೆ. ದೀಪವಿಲ್ಲದೆ ಪ್ರಕಾಶ ಬೆಳಗುತ್ತಿದೆ. ಪ್ರೇಮತರಂಗಿಣಿ ಹರಿಯು ವುದು; ಅದರ ತೀರದಲ್ಲಿ ಪ್ರೇಮವಲ್ಲರಿಗಳು ಹಬ್ಬಿವೆ; ಎಲೆ ಹೂ ಎಲ್ಲ ಪ್ರೇಮಮಯ; ಸುಗಂಧವೂ ಪ್ರೇಮಮಯ. ಹೊಳೆಯ ಮೇಲೆ ಹರಗೋಲು; ಅಂಬಿಗನು ಪಯಣಿಗನನ್ನು ಕೂರಿಸಿ ಕೊಂಡು, ಹಾಡುಹೇಳುತ್ತ ಹುಟ್ಟುಹಾಕಿ ಹೊಳೆ ದಾಟಿಸು ವನು. ಹೊಳೆಯಾಚೆ ಒಂದು ದಿನ್ನೆಯಿದೆ. ಅದರ ಮೇಲಿಂದ ನಾಗಮುರಿಗೆಯಂತೆ ದಾರಿ ಹೋಗಿರುವುದು. ಅಲ್ಲಿ ಅಮೃತದ ಝರಿಗಳಿವೆ. ಪವನದಮೇಲೆ ಸವಾರಿ ಮಾಡುತ್ತ ಪಯಣಿ ಗನು ಮುಂದೆ ಹೋಗುವನು. ಆ ಮುಂದೆ ಪುರುಷೋತ್ತಮನ ದರ್ಶನ!" ಕತೆ ಹೇಳಿ ಅಜ್ಜಿ ಮನೆಯೊಳಕ್ಕೆ ಹೋದಳು....

ಮಾವಿನಹಣ್ಣಿನ ತಿರುಳಲ್ಲಿ ಬಣ್ಣ, ಸಿಹಿ, ರಸ ಒಗ್ಗೂಡಿ ಬೆರೆತಂತೆ, ಆತನ ಅಸ್ತಿತ್ವವು ನನ್ನ ಅಣುಕಣದಲ್ಲಿ ಕೀವಿದೆ. ತನ್ನ ತೋಳಮುತ್ತಿಗೆಯಿಂದ ಭೂಮಿಯು ಜಲಾಶಯದ ರಕ್ಷಣೆ ಮಾಡುತ್ತಿರುವಂತೆಯೇ ಆತನು ನನ್ನನ್ನು ಸುತ್ತುವರಿದು ಕಾಯುವನು. ಎರಡೂ ಕಣ್ಣು ಒಂದಕ್ಕೊಂದು ಅತಿಸಮೀಪ, ಆದರೆ ಒಂದು ಇನ್ನೊಂದನ್ನು ನೋಡಬಾರದು— ಹಾಗೆಯೇ ನನ್ನ ಗತಿಯಾಗಿದೆ. ನನ್ನ ಮೇಲಿನ ಅವನ ಸತ್ತೆಯ ಅರಿವು ನನಗೆ ಕ್ಷಣಕ್ಷಣಕ್ಕೂ ಆಗುತ್ತಿತ್ತು; ಆದರೆ ಸತ್ತಾಧೀಶ ಪ್ರಾಣ

ನಾಥನ ಚಿಟ್ಟಿ ನನಗೆ ಇದುವರೆಗೂ ಆಗಿರಲಿಲ್ಲ. ಇರುಳು-ಹಗಲು ಒಂದರ ಬೆನ್ನಿಗಿನ್ನೊಂದು ಹೊರಟಂತೆ ಚಕ್ರಾಕಾರವಾಗಿ ತಿರುತಿರುಗಿದರೂ ಒಂದನ್ನೊಂದು ಕಾಣದಂತೆ— ನನ್ನ ಬಾಳೂ ಅದೇ ಬಗೆಯದೇ ?.... ಈ ಶಂಕೆ ಮನಸ್ಸಿಗೆ ತಾಕುವಷ್ಟರಲ್ಲಿ ಒಳಗಿನಿಂದೊಂದು ದನಿ ಹೇಳಿತು, —"ಛೆ ! ಸಕ್ಕರೆ ಬೆರೆತ ಹಾಲಿನಂತೆ ನಮ್ಮೀರ್ವರ ಜೀವನ !"

ಭೂಮಿಯ ಮೇಲಿನ ಜಲವು ಮೇಘಗಳೊಡನೆ ಸಮರಸವಾಗುವಾಗ ತಪಿಸಿ ತಪಿಸಿ, ರೂಪಪಲ್ಲಟಿಸಿ, ಉಗಿಯಾಗಿ, ಮೇಲೆ ಮೇಲೆ ತನ್ನ ಗತಿಯಲ್ಲಿ ಹೋಗುವಂತೆ, ನನ್ನ ಮನವು ವಿರಹಾಗ್ನಿಯ ಭಟ್ಟಿಯಲ್ಲಿ ಕುದಿದು ಸಳಸಳವೆನ್ನುತ್ತಿತ್ತು; ಏಕಾಂಗಿಜೀವನದ ವ್ಯಥೆಯು ಬಾಷ್ಪರೂಪ ಹೊಂದಿ ಸುತ್ತೆಲ್ಲ ತೇಲಾಡುತ್ತಿತ್ತು; ಆಶೆ-ನಿರಾಶೆಗಳ ಜೋಕಾಲಿಯಲ್ಲಿ ನನ್ನ ಮನ ಜೀಕಾಡುತ್ತಿರುವಾಗ ಮನೆಯ ಹೊರಗೆ ಒಂದು ಮುದಿ ಗಾಗೆಯ ಆರ್ತಧ್ವನಿ ಕೇಳಿಸಿತು. ಹೊರಗೆಹೋಗಿ ನೋಡಿದೆನು. —ಹಲವು ಕಾಗೆಗಳು ಆ ಮುದಿಗಾಗೆಯನ್ನು ಮುತ್ತಿ ಚುಂಚಿನಿಂದ ಚುಚ್ಚುತ್ತಿದ್ದವು, ಮುದಿಗಾಗೆ ದುಃಖದಿಂದ ಕಾವ್ ಕಾವ್ ಎಂದು ಒರಲುತ್ತಿತ್ತು. ಅದನ್ನು ಹಿಂಸಿಸುತ್ತಿದ್ದ ಕಾಗೆಯ ಬಳಗವನ್ನು ಒಂದು ಹರಳಿನಿಂದ ಹಾರಹೊಡೆದೆ. ಕೊಂಚಹೊತ್ತಿನ ಮೇಲೆ ಆ ಮುದಿಗಾಗೆ ಹತ್ತಿರದ ಮರವೇರಿ ಕುಳಿತಿತು. ಆ ಕಾಗೆ ನನಗೂ ಹೆದರಿಯೇ ಹೋಗಿತ್ತು ನಾನು ಮರುಳುವಷ್ಟರಲ್ಲಿ ಸಮೀಪದ ಮಾವಿನ ಮರದ ಮೇಲೆ ಹಕ್ಕಿಗಳ ಹಿಂಡು ಕಾಣಿಸಿತು. ಒಂದೇ ಹಣ್ಣಿನ ಸುತ್ತು ನಾಲ್ಕೆಂಟು ಹಕ್ಕಿ ನೆರೆದಿದ್ದವು. ಹಣ್ಣು ತಿನ್ನುತ್ತಿದ್ದ ಹಕ್ಕಿ ತನ್ನ ಬಳಗದವರನ್ನು ಹತ್ತಿರ ಬರಗೊಡಲೊಲ್ಲದು. ಒಂದೇ

ಹಣ್ಣಿಗಾಗಿ ಆ ಹಕ್ಕಿಗಳಲ್ಲಿ ಜಗಳ ನಡೆಯಿತು. ನಾನು ಪಡ ಸಾಲೆಗೆ ಬಂದೆ. ಅಷ್ಟರಲ್ಲಿ ಬಿರುಗಾಳಿ ಬೀಸತೊಡಗಿತು, ಬಾಗಿಲು-ಕಿಟಕಿ ಅಪ್ಪಳಿಸತೊಡಗಿದವು, ದನಕರುಗಳು ಭೀತಿ ಯಿಂದ ಒದರತೊಡಗಿದವು, ಹೂಗಿಡಗಳು ಮುರಿದುಬಿದ್ದವು, ಹೂಗಳೆಲ್ಲ ಉದುರಿಹೋದವು, ಬಳ್ಳಿ ನೆಲಕ್ಕುರುಳಿದವು. ಗಿಡ ಗಳ ರೆಂಬೆ ಕೊಂಬೆಗಳು ಒಂದಕ್ಕೊಂದು ತಿಕ್ಕಿ ಜಗಳವಾಡು ತ್ತಿರುವಂತೆ ತೋರಿತು. ನೆಲ ಎಲೆಗಳಿಂದ ಹಾಸಿದಂತಾಯಿತು. ಧೂಳು ಕಣ್ಣು ಮೂಗು ಮುತ್ತಿಬಿಟ್ಟಿತು. ಏನೂ ಯಾರೂ ಕಾಣಿಸದಾದರು. ನಾನು ಕಿಟಕಿಯ ಕಾಚಿನ ಕದಗಳೊಳ ಗಿಂದ ಹೊರಗೆ ನೋಡತೊಡಗಿದೆ. ಈ ತಾಮಸ ಝಂಝಾ ವಾತದ ರಾಕ್ಷಸೀರೂಪವನ್ನೂ ಆಘೋರ ಕೃತ್ಯಗಳನ್ನೂ ನೋಡಿ, ನನ್ನ ಮಾನಸ ಸರೋವರದಲ್ಲಿ ಹೆದ್ದೆರೆಗಳೆದ್ದವು. ಆ ಕ್ಷೋಭೆ ಯಿಂದ ನನಗೆ ಉಸಿರುಗಟ್ಟಿದಂತಾಯಿತು. ಬೇಸಿಗೆಯ ಉರಿ ಬಿಸಲಲ್ಲಿ ಬಾಗಿಲು ಕಿಟಕಿ ಮುಚ್ಚಿಕೊಂಡು ಕುಳಿತರೆ ಆಗು ವಂತಾಯಿತು ನನ್ನ ಮನಸ್ಸಿಗೆ. ಬಯಲಲ್ಲಿ ಗಾಳಿಗೆ ಮೈಯೊಡ್ಡಿ ಹಾಯಾಗಿ ಕುಳ್ಳಿರಬೇಕೆನಿಸಿತು. ನೀರೊಳಗೆ ಮುಳುಗುತ್ತಿ ದ್ದವನು ಹವೆಗಾಗಿ ಚಡಪಡಿಸುವಂತೆ, ಒಂದು ಕ್ಷಣದ ನಿತಾಂತ ವಿಶ್ರಾಂತಿ ಲಭಿಸಲಿ ಎಂದು ನಾನು ವ್ಯಾಕುಲಳಾದೆ.

ಎಲ್ಲಿ ಈರ್ಷೆ ಇಲ್ಲವೋ, ಸ್ಪರ್ಧೆಯಿಲ್ಲವೋ, ಅಸೂಯೆ ಇಲ್ಲವೋ, ಭೀತಿಯಿಲ್ಲವೋ ಅಂತಹ ತಾಣವನ್ನು ನಾನು ಹುಡುಕತೊಡಗಿದೆ. ಎಲ್ಲಿ ಆರೋಗ್ಯವಿದೆಯೋ, ಸೌಖ್ಯ ವಿದೆಯೋ, ಪ್ರೇಮವಿದೆಯೋ, ಐಕ್ಯವಿದೆಯೋ, ಶಾಂತಿ ಯಿದೆಯೋ ಅಂತಹ ತಾಣಕ್ಕೆ ಹೋಗಬೇಕೆಂದೆ. ಒಡನೆ ನನಗೆ ಅಮರಪುರಿಯ ಸ್ಮರಣೆಯಾಯಿತು.

ಅಮರಪುರಿಯ ಪ್ರವಾಸಕ್ಕೆ ಹೊರಡುವುದಾಗಿ ಗೊತ್ತುಪಡಿಸಿದೆ. ಪ್ರವಾಸಕ್ಕೆ ಬೇಕಾಗುವ ಸಾಹಿತ್ಯ ತುಸುಸುಸು ಎಂದರೂ ತಕ್ಕಷ್ಟು ಒಜ್ಜೆಯೇ ಆಯಿತು. ಇಷ್ಟು ಭಾರವನ್ನು ಸಂಬಾಳಿಸುತ್ತ ಹೇಗೂ ಅಗಸೆಯ ಬಾಗಿಲವರೆಗೆ ಬಂದೆ. ಅಗಸೆಯ ಹತ್ತಿರವೇ 'ಮೋಹನವನ' ಉದ್ಯಾನ. ಬೆಡಗಿನ ಬಣ್ಣಗಳ ಪಾತರಗಿತ್ತಿಗಳ ಮಾದಕಲೀಲೆಗಳಿಂದ ನನ್ನ ಮನಸ್ಸಿನಲ್ಲಿ ಗೊಂದಲವೆದ್ದಿತು. ಹಕ್ಕಿಗಳ ಕೂಜನವು ನನ್ನನ್ನು ಸೆರೆಹಿಡಿದು ಬಿಟ್ಟಿತು. ವೃಕ್ಷವಲ್ಲರಿಗಳು ತಮ್ಮ ಮೋಹಪಾಶವನ್ನು ಚಾಚಿದವು. 'ಮೋಹನವನ'ದ ಬೆಳ್ಳಂಬೆಳಕಿನಿಂದ ಕಣ್ಣುಕುಕ್ಕದ, ಮೋಹಗೊಳ್ಳದ ಪಾಂಥನು ಬಹುಶಃ ಇಲ್ಲವೆಂದರೂ ಸಲ್ಲುವದು! ಕಣ್ಣನ್ನು ಕುರುಡುಗೊಳಿಸುವ ಪ್ರಖರ ಪ್ರಖರ ಥಳಕುಬೆಳಕು! ಪ್ರವಾಸಕ್ಕೆ ಬೇಕಾಗುವ ಹೊರೆಯನ್ನು ಜೀವಕ್ಕಿಂತ ಹೆಚ್ಚಾಗಿ ಕಾಯುತ್ತ ಹೊರಟ ಪಯಣಿಗನು ಮಂತ್ರಮುಗ್ಧನಾದಂತಾಗಿ ನಿಂತಲ್ಲಿಯೆ ನಿಲ್ಲುವಂತೆ ಮಾಡುವ ಮಾಟಗಾರಿಕೆಯು ಆ ತೋಟದಲ್ಲಿದೆ. ಅಂತೂ ನಾನು ಮುಂದುವರಿದೆ. ಇಬ್ಬದಿಗೂ ಧನದೌಲತ್ತಿನ ಕೊತ್ತಳಗಳು ಕಾಣತೊಡಗಿದವು. ಅವುಗಳ ಮಾಯಾಕಿರಣಗಳು ದೂರದವರೆಗೂ ಹಬ್ಬಿದ್ದವು. ಅವುಗಳ ಸ್ಪರ್ಶವಾದೊಡನೆ ಪಯಣಿಗನು ಆಕೃಷ್ಟನಾಗಿ, ದಾಸನಾಗಿ ಅಲ್ಲಿಯೇ ನಿಂತುಬಿಡುವನು. ಅಜ್ಜಿ ಹೇಳಿದ್ದನ್ನು ಮನದಂದು, ನಾನು ಉದ್ಯಾನದತ್ತ ಒಂದು ನಿಮಿಷ ಭೀತಿಯಿಂದಲೇ ದೃಷ್ಟಿಕ್ಷೇಪ ಮಾಡಿ, ಒಡನೆ ಮುಂದಿನ ಬಟ್ಟಬಯಲಿನತ್ತ ಅಡಿಯಿಡತೊಡಗಿದೆ. ಹಸಿರು ಹಳದಿ ಹುಲ್ಲಿನ ಮೇಲೆ ಎಳೆಬಿಸಿಲು ಬಿದ್ದಾಗ ಕಂಡುಬರುವಂತಹ ಸೊಗಸು ಆ ಬಯಲತುಂಬ

ಹಬ್ಬಿತ್ತು. ಬಿದಿರಮೆಳೆಗಳಲ್ಲಿ ಗಾಳಿ ಸುಳಿಯುವಾಗ ಒಂದು ಸಂಜುಲನಾದವು ಹೊರಡುತ್ತಿರುವಂತೆ ಈ ಬಯಲೊಳಗಿಂದ ನಡೆಯುವಾಗ ಕೇಳಬರುತ್ತಿತ್ತು. ಸಮೀಪದಲ್ಲಿಯೇ ಒಂದು ಚಿಕ್ಕ ಜಲಾಶಯವಿದ್ದಿತು. ಅದರ ದಂಡೆಯಲ್ಲಿ ಕ್ಷಣಕ್ಷಣಕ್ಕೆ ಬೇರೆ ಬೇರೆ ಬಣ್ಣ ಧರಿಸುವ ಪಕ್ಷಿಗಳು ಒಯ್ಯಾರದಿಂದ ಹೆಜ್ಜೆ ಹಾಕುತ್ತ ಮಂದಗತಿಯಲ್ಲಿ ಸಾಗಿದ್ದವು. ಸ್ವಲ್ಪ ಮುಂದೆಯೇ ಇರುವ ವಿಶಾಲವೃಕ್ಷದ ನೆರಳಿನಲ್ಲಿ ಎಳೆಹುಲ್ಲ ಹಾಸಿಗೆಯ ಮೇಲೆ ಕ್ಷಣಹೊತ್ತು ಹಾಯಾಗಿ ವಿಶ್ರಮಿಸಿದೆ. ವೃಕ್ಷವೇರಿ ಕುಳಿತಿದ್ದ ಹಕ್ಕಿಯೊಂದು ನುಡಿಯಿತು—''ವಿವೇಕತರುವಿನ ನೆರಳಲ್ಲಿ ವಿಶ್ರಾಂತಿ ಪಡೆಯುವ ಹೆಣ್ಣುಮಗಳೆ, ಮೇಲೆ ನೋಡು!'' ನಾನು ಮೇಲೆ ಕತ್ತೆತ್ತಿ ನೋಡಿದೆ. ಇನ್ನೊಂದು ಹಕ್ಕಿ ನುಡಿಯಿತು—''ನಿನ್ನ ಭಾರವನ್ನು ಭೂಮಿ ಹೊರುತ್ತಾಳೆ, ನಿನ್ನ ತಲೆಯಮೇಲಿನ ಹೊರೆಯನ್ನು ಯಾರು ಹೊರಬೇಕು?'' ನಾನು ಯೋಚನಾಮಗ್ನಳಾದೆ. ಮೂರನೆಯ ಹಕ್ಕಿ ನುಡಿಯಿತು—''ಒಂದು ಕೈಯಲ್ಲಿ ನೀತಿಯ ಶಸ್ತ್ರ, ಇನ್ನೊಂದು ಕೈಯಲ್ಲಿ ಧರ್ಮಧ್ವಜ!'' ನಾಲ್ಕನೆಯ ಹಕ್ಕಿ ನುಡಿಯಿತು— ''ತ್ಯಾಗದ ತಿಲಕ, ಜ್ಞಾನದ ದೀಪಕ!'' ಐದನೆಯದೆಂದಿತು— ''ಮಾಂಗಲ್ಯದ ಸೂತ್ರ, ಸೇವೆಯ ವಸ್ತ್ರ!'' ಆರನೆಯದು ಎಂದಿತು—''ಪ್ರೇಮದ ಅಂಜನ, ಶಾಂತಿಯ ಕಂಕಣ!'' ನಾನು ನೋಡುನೋಡುತ್ತಿರುವಾಗಲೇ ಎಲ್ಲ ಹಕ್ಕಿಗಳು ತಮ್ಮ ಅಚ್ಚಬಿಳಿ ಪಕ್ಕಗಳನ್ನು ಪಸರಿಸಿ ಬೀಸುತ್ತ, ಸಾವಕಾಶವಾಗಿ ಹಾರಿಹೋಗತೊಡಗಿದವು. ಅವು ಹಾರುವಾಗ ಪಕ್ಕಗಳು ಸಪ್ಪಳ ಮಾಡುತ್ತಿದ್ದಿಲ್ಲ. ಚುಂಚು ತೀಕ್ಷ್ಣವಾಗಿರಲಿಲ್ಲ. ನುಡಿ ನೀರಸವಾಗಿರಲಿಲ್ಲ. ಮಾನವರ

ಗಿಂತಲೂ ವಿವೇಕಶಾಲಿಗಳಾಗಿ, ವೀರರಿಗಿಂತಲೂ ಧೈರ್ಯ ಶಾಲಿಗಳಾಗಿ, ದುಗ್ಧಕ್ಕಿಂತಲೂ ಧವಲವಾಗಿ, ಪುಷ್ಪಕ್ಕಿಂತಲೂ ವಿಮಲವಾಗಿ ತೋರುವ ಈ ಮಾತಾಡುವ ಹಕ್ಕಿಗಳನ್ನು ನೋಡಿ ನಾನು ಆಶ್ಚರ್ಯಚಕಿತಳಾದೆ.

ನಾನು ಹೊತ್ತು ತಂದ ಹೊರೆಯನ್ನು ಬಿಚ್ಚಿ, ಒಳಗಿನ ಒಂದೊಂದು ವಸ್ತುವನ್ನು ಮೇಲಮೇಲಕ್ಕೆ ತೂರಿದೆ. ಹಕ್ಕಿ ಗಳಂತೆ ಹಾರಿಹೋಗುವ ಶಕ್ತಿ ಅವಕ್ಕೆಲ್ಲಿ ಬರಬೇಕು! ಅವು ಅಸ್ತವ್ಯಸ್ತವಾಗಿ ನೆಲದ ಮೇಲೆಯೇ ಬಿದ್ದುಬಿಟ್ಟವು. ನಾನು ಭಾರರಹಿತಳಾಗಿ ಮುಂದಿನ ದಾರಿ ತುಳಿಯತೊಡಗಿದೆ. ದಾರಿ ಯಲ್ಲಿ ಹೊನ್ನಿನ ಹುಡಿಯ ತಳಿ ಹಾಕಲಾಗಿತ್ತು. ಪಚ್ಚದ ಗಿಡಗಳಿಗೆ ರತ್ನದ ಹೂಬಿಟ್ಟಿದ್ದವು. ವಜ್ರದ ದೇಟು, ಮಾಣಿ ಕ್ಯದ ಮೊಗ್ಗು, ಮುತ್ತಿನ ಗೊಂಚಲು ತೂಗುಬಿದ್ದಿದ್ದವು. ತೈಲವಿಲ್ಲದೆ ಬತ್ತಿ ಉರಿಯುತ್ತಿದ್ದವು. ದೀಪವಿಲ್ಲದೆ ಪ್ರಕಾಶ ಬಿದ್ದಿತ್ತು. ಈ ಮನೋಹಾರಿ ಮಾರ್ಗದಿಂದ ಮುನ್ನಡೆದು ನಾನು ನದೀತೀರಕ್ಕೆ ಬಂದೆ.

ಅಂಬಿಗನು ಪಯಣಿಗರ ದಾರಿಯನ್ನೇ ನೋಡುತ್ತಿದ್ದನು. ನನ್ನನ್ನು ನೋಡಿ ಆತನು ದೋಣಿಯನ್ನು ದಂಡೆಗೆ ತಂದು ಹಚ್ಚಿದನು. ತೀರ ಗುರುತಿನವನಂತೆ ನನ್ನ ಮುಖವನ್ನು ದಿಟ್ಟಿಸಿ ನೋಡುತ್ತ, ನಗೆಮೊಗದಿಂದ ಕೇಳಿದ—"ಕದ್ದು ಮುಚ್ಚಿ ತಂದ ಬೆಳ್ಳಿ ಬಂಗಾರ, ನಾಣ್ಯ ಹತ್ತಿರ ಇಲ್ಲವಷ್ಟೇ! ತಪ್ಪಿ ಉಳಿದಿರ ಬಹುದಾದ ವಸ್ತುವೊಡವೆ ಇಲ್ಲವಷ್ಟೇ!" ನಾನು ಇಲ್ಲವೆಂದು ಸೂಚಿಸುತ್ತಾ ಗೋಣುಹಾಕಿದೆ. ನೌಕೆಯಲ್ಲಿ ಕುಳಿತೆ. ಅಂಬಿಗ ಹುಟ್ಟುಹಾಕತೊಡಗಿದ. ನೌಕೆ ಜೋಲಿ ಹೊಡೆಯತೊಡ ಗಿತು. ಅಂಬಿಗನೆಂದ—"ತಾಯಿ, ಎಂತಹದೋ ಭಾರ ಇನ್ನೂ

ಉಳಿದಿದೆ. ಹರಗೋಲು ನೇರವಾಗಿ ಸಾಗಲೊಲ್ಲದು.'' ಅಂಬಿಗನು ವಿಚಾರಮಗ್ನನಾದನು. ನಾನೂ ಯೋಚಿಸತೊಡಗಿದೆ— ನನ್ನ ಹತ್ತಿರವಂತೂ ಯಾವ ವಸ್ತುವೂ ಇಲ್ಲ; ಅವನು ಕೇಳಿದಾಗ ಏನೂ ಇಲ್ಲವೆಂದು ನಾನೇನೋ ಗೋಣುಹಾಕಿದೆ; ಆದರೆ ಏನೋ ಇದೆಯೆಂದು ಈಗ ಅನಿಸತೊಡಗಿತು,—ಪ್ರಾಣನಾಥನ ಬೆಟ್ಟಿಯಾಗದ್ದಕ್ಕೆ ವಿರಹವ್ಯಥೆ ಹಾಗೂ ಬೆಟ್ಟಿಯ ಉತ್ಕಟ ಇಚ್ಛೆ: ಅಂತಃಕರಣಕ್ಕೆ ಈ ಎರಡೂ ಭಾವನೆಗಳ ಭಾರ! ನಾನು ಅಂಬಿಗನನ್ನು ಕರೆದು, ಅವನೆದುರಿಗೆ ನನ್ನ ಮನಸ್ಸಿನ ಭಾರವನ್ನು ತೋಡಿದೆ. ಆತನೆಂದ—"ತಾಯಿ, ಅಂಜಲಿ ಬಿಡುವ ತೆರದಲ್ಲಿ ಎರಡೂ ಬೊಗಸೆಗಳನ್ನು ಕೂಡಿಸಿರಿ, ಮನಸ್ಸಿನ ಭಾರ ಅದರಲ್ಲಿ ಹಾಕಿ ನನ್ನ ಕಡೆಗೆ ಬಿಡಿರಿ! ಆ ಭಾರವನ್ನು ನಾನು ಹೊರುವೆ! ಅದೇ ನನ್ನ ಕೆಲಸ; ಎಂತಲೇ ನಾನಿಲ್ಲಿಯ ಅಂಬಿಗನು!'' ಎಂತಹ ಅಂತಃಕರಣವಂತನು ಈ ಅಂಬಿಗನು! ನನಗೆ ಅವನ ಹೆಸರು ಕೇಳಬೇಕೆನಿಸಿತು. ಅವನಿಗೆ ಕೇಳಿದೆ—"ನಿನ್ನ ಹೆಸರೇನು?'' ಅಂಬಿಗನಂದ— "ನನ್ನ ಹೆಸರು ವಿಶ್ವಾಸ.'' ನಾನು ವಿಶ್ವಾಸನ ಮೇಲೆ ಎಲ್ಲ ಭಾರ ಹಾಕಿದೆ. ಹರಗೋಲು ಮುಂದೆ ಸಾಗಿತು.

ಕೂಸಿಗೆ ನಿದ್ದೆ ಹತ್ತಲೆಂದು ತಾಯಿ ಅದನ್ನು ತೊಟ್ಟಿಲಲ್ಲಿ ಮಲಗಿಸಿ, ತನ್ನ ಕಂದನನ್ನೇ ಬಣ್ಣಿಸಿ ಬಣ್ಣಿಸಿ ಹಾಡುವ ಲಾಲಿಯನ್ನು ಹೇಳುತ್ತ ತೊಟ್ಟಿಲು ಜೀಕುತ್ತಾಳೆ; ಕೂಸು ಮಾತ್ರ ನಿದ್ದೆ ಮಾಡದೆ ಹಾಡು ಕೇಳುತ್ತ, ಸುತ್ತಲಿನ ಮೋಜು ನೋಡುತ್ತ ಎಚ್ಚರದಿಂದಲೇ ಇರುತ್ತದೆ—ನಾನಾದರೂ ಆ ಮಗುವಿನಂತೆಯೇ ಸುಖಲೋಲಳಾಗಿದ್ದೆ. ನೌಕೆ ಅಂತರಾಳದಲ್ಲಿ ಸಾಗಿತ್ತೊ, ನೀರಿನ ಮೇಲಕ್ಕೊ, ನೀರಿನ ಒಳಕ್ಕೊ—

ನನಗೇನೂ ತಿಳಿಯಲೊಲ್ಲದು. ಬಿಟ್ಟ ಬಾಣವು ಸೊಟ್ಟಪಟ್ಟ ಹೋಗದೆ, ನೇರವಾಗಿ ವೇಗದಿಂದ ಎಂತು ಮುಂದೆ ಹೋಗುವುದೋ, ಅಂತಹದೇ ಗತಿಯಿಂದ ನೌಕೆಯು ಮುಂದೆ ಮುಂದೆ ನಡೆದಿದ್ದಿತು— ಎಂದಿಷ್ಟೇ ನನಗೆ ತಿಳಿಯುತ್ತಿತ್ತು. ನೌಕೆಯು ಮುಂದಮುಂದಕ್ಕೆ ನಡೆದೇ ಇದ್ದಿತು. ಇಚ್ಛಿತ ಸ್ಥಳವು ದೃಷ್ಟಿಪಥದಲ್ಲಿ ಬಂದೊಡನೆ ಪಾಂಥನು ನವೋಲ್ಲಾಸದಿಂದ "ಬಂದಿತು, ಬಂದಿತು" ಎಂದು ತನ್ನಷ್ಟಕ್ಕೆ ತಾನೇ ಉದ್ಗಾರ ತೆಗೆಯುತ್ತಿರುವಂತೆ, ಅಂಬಿಗನು ನಡುನಡುವೆ "ಅದು ನೋಡು, ಇದು ನೋಡು" ಎನ್ನುತ್ತ ಹುಟ್ಟುಹಾಕುತ್ತಿದ್ದನು. ಅವನ ಉದ್ಗಾರಗಳಿಂದ ನಾನು ವಿಚಾರತಂದ್ರಿಯಿಂದ ಎಚ್ಚರವಾಗುತ್ತಿದ್ದೆ. ಹೊಳೆಯೊಳಗಿನ ಚಿಕ್ಕ ಅಲೆಗಳು, ದೊಡ್ಡ ಅಲೆಗಳು ನೌಕೆಯ ಬಳಿ ಬಂದು, ಹಿತಗೋಷ್ಠಿ ಮಾಡಿ ಹಿಂದಿರುಗುತ್ತಿದ್ದವು. ಮಂದಮಾರುತನು ಶೀತಲತೆಯನ್ನು ಬೀರುತ್ತ ನೌಕೆಯನ್ನು ಇದಿರುಗೊಳ್ಳಲು ಬರುತ್ತಿದ್ದನು; ನೌಕೆಯು ಅತ್ತಿತ್ತ ವಿನಯದಿಂದ ಒಲೆದು ಆ ಸ್ವಾಗತವನ್ನು ಸ್ವೀಕರಿಸುತ್ತಿದ್ದಿತು. ಪೀತವರ್ಣದ ಪಕ್ಷಿಗಳು ಎಲ್ಲಿಂದಲೋ ಹಾರಿ ಬಂದು, ವಿಶ್ವಾಸನೊಡನೆ ಮಾತನಾಡಿ, ಹೋಗಿಬಿಡುತ್ತಿದ್ದವು. ಆಕಾಶದ ಭವ್ಯತೆ, ಪೂರ್ಣಿಮೆಯ ಪೂರ್ಣತೆ, ಯಾಮಿನಿಯ ಶಾಂತತೆ, ಪರ್ವತದ ಸ್ಥಿರತೆ ನೌಕೆಯ ಗತಿಯಲ್ಲಿ ತೋರುತ್ತಿದ್ದವು. ಹೊಳೆಯ ತಳ ಕೂಡ ಕಾಣುವಷ್ಟು ನೀರು ಸ್ವಚ್ಛವಾಗಿದ್ದಿತು; ಅದರಲ್ಲಿ ಗಗನಮಂಡಲವೆ ಇಳಿದು ಬಂದಿತು. ಜೀವನತರುವಿಗೆ ನವಪಲ್ಲವಗಳ ಭರ ಬಂದಿತು. ಪುಷ್ಪಗಳಿಲ್ಲದೆ ಪರಿಮಳವು ಪಸರಿಸಿತು. ಪ್ರೇಮತರುಗಳೊಳಗಿಂದ ಸುಳಿವ ಸುಳಿಗಾಳಿಯಿಂದ ಸಕಲ ಪ್ರದೇ

ಶವೂ ಪ್ರೇಮವಾಯಿತು. ಪ್ರೇಮದ ಉಸುರಿನಿಂದ ಅಣು ಅಣುಗಳು ಪುಲಕಿತವಾದವು. ಮೇಲೆ ಕೆಳಗೆ, ಸುತ್ತು ಮುತ್ತು ಎಲ್ಲ ಕಡೆಗೆ ಪ್ರೇಮವೇ ಪ್ರೇಮವು! ನದಿಗೆ ನೆರೆ ಬಂದಾಗ ತೀರದ ಮೇಲಿನ ಊರು ಅದರಲ್ಲಿ ಮುಳುಗಿಹೋಗುವಂತೆ ಪ್ರೇಮದ ಮಹಾಪೂರದಲ್ಲಿ ಇಡಿಯ ವಿಶ್ವವೇ ಮುಳುಗಿ ಹೋಯಿತು. ಪ್ರತಿ ವಸ್ತುವಿಗೆ ಆಕಾರವಿರುವಂತೆ, ಪ್ರತಿ ಆಕಾರದಲ್ಲಿಯೂ ನನ್ನ ಪ್ರಾಣನಾಥನ ಪ್ರೇಮವು ತುಂಬಿ ತುಳುಕುತ್ತಿರುವಂತೆ ನನಗೆ ತೋರಿತು. ಎಂತು ನಮ್ಮಿಬ್ಬರ ಪ್ರೇಮವೋ ಅಂತು ತೃಣವಲದಿಂದ, ಮೃತ್ಕಣದಿಂದ ಹಿಡಿ ದೊಂಡು ತಾರಾವಳಿಯ ವರೆಗೆ—ಸೂರ್ಯಚಂದ್ರರ ವರೆಗೆ ವಸ್ತುಮಾತ್ರವೆಲ್ಲ ಪ್ರೇಮಸೂತ್ರದಿಂದ ದೃಢವಾಗಿ ಬದ್ಧವಾಗಿ ರುವಂತೆ ನನಗೆ ಕಾಣಹತ್ತಿತು. ಆಕಾಶದ ನೀಲವರ್ಣದಲ್ಲಿ, ತರುಲತೆಗಳ ಹರಿದ್ವರ್ಣದಲ್ಲಿ, ಸುಮಗಳ ಪರಿಮಳದಲ್ಲಿ, ಸೂರ್ಯರಶ್ಮಿಗಳ ಸುವರ್ಣವರ್ಣದಲ್ಲಿ, ಶಶಿಯ ಶೀತಲತೆ ಯಲ್ಲಿ, ತಾರೆಗಳ ಮಿನುಗಿನಲ್ಲಿ, ಪಕ್ಷಿಗಳ ಕೂಜನದಲ್ಲಿ, ವಾಯು ವಿನ ಸ್ಪರ್ಶದಲ್ಲಿ, ಜಲತರಂಗಗಳಲ್ಲಿ, ನೌಕೆಯಲ್ಲಿ, ವಿಶ್ವಾಸ ನಾವಿಕನಲ್ಲಿ— ನಾನು ಕಾಣುತ್ತಿರುವ ಪ್ರತಿ ಪದಾರ್ಥ ದಲ್ಲಿಯೂ, ನನ್ನ ಮನಃಸೃಷ್ಟಿಯಲ್ಲಿ ಏಳುವ ಪ್ರತಿಭಾವ ದಲ್ಲಿಯೂ ನನ್ನ ಪ್ರಾಣೇಶ್ವರನೇ ನನಗೆ ಭಾಸವಾಗುತ್ತಿದ್ದನು. ವಿಶ್ವಾಸ ನಾವಿಕನು ನಡುವೆಯೇ ಏನನ್ನೋ ಉದ್ಗರಿಸಿದನು —ನಾನು ನನ್ನ ಪ್ರೇಮಸಮಾಧಿಯಿಂದ ಎಚ್ಚತ್ತೆ.

ನೌಕೆಯು ಪಾರತೀರವನ್ನು ಮುಟ್ಟಿತು. ದಿನ್ನೆಯ ಮೇಲೆ ಕಾಲಿಡುತ್ತಲೆ ಮಂದಾನಿಲನು ಇದಿರುಗೊಂಡನು. ಮಂದಾ ನಿಲನ ವಾಹನವನ್ನೇರಿ ನಾನು ಮೇಲೆ ಮೇಲೆ ಹೋಗಹತ್ತಿದೆ.

ಬಣ್ಣಬಣ್ಣದ ಮೋಡಗಳು ನನ್ನ ಕೈಕುಲುಕಿಸಿ, ನನಗೆ ಜೊತೆ ಗೂಟ್ಟು ನಡೆದವು. ಅಮರಪುರಿಯಲ್ಲಿ ಎಲ್ಲವೂ ಕೌತುಕ ಮಯ. ನವಯೌವನದ ಗಾಳಿ ಅಲ್ಲಿ ಯಾವಾಗಲೂ ಬೀಸು ತ್ತಿದೆ. ಆರೋಗ್ಯದ ಬೆಳೆಯೇ ಅಲ್ಲಿ ಬೆಳೆಯುತ್ತಿದೆ. ಸಾಮ ರ್ಥ್ಯದ ಹಣ್ಣುಗಳ ಬೆಳೆಯೇ ಅಲ್ಲಿ ಬೆಳೆಯುತ್ತಿದೆ. ಸೌಖ್ಯದ ಉದ್ಯಾನಗಳೇ ಶೋಭಿಸುತ್ತಿವೆ. ಅಮೃತದ ಬುಗ್ಗೆಗಳೇ ಚಿಮ್ಮುತ್ತಿವೆ. ಅಮೃತದ ನದಿಗಳೇ ಹರಿಯುತ್ತಿವೆ. ಶಾಂತಿಯ ವೃಷ್ಟಿಯೇ ಅಲ್ಲಿ ಆಗುತ್ತಿದೆ. ಅಲ್ಲಿ ಸಿರಿವಂತಿಕೆಗೆ ಗೌರವವಿಲ್ಲ; ಬಡತನವನ್ನು ಕಡೆಗಣಿಸುವದಿಲ್ಲ; ಬಾಲ್ಯದಲ್ಲಿಯ ಅಜ್ಞಾನ ವಿಲ್ಲ; ಮುಪ್ಪಿನಲ್ಲಿಯ ನಿರಾಶೆಯಿಲ್ಲ; ಅಲ್ಲಿ ಇರುಳಿನ ಕತ್ತಲೆ ಯಿಲ್ಲ; ಹಗಲಿನ ಬೆಳಕಿಲ್ಲ.

ಮೊಗ್ಗಿಗೆ ಗೊತ್ತಾಗದೆಯೆ ಅದು ಅರಳುವಂತೆ ನನ್ನ ಹೃದ ಯವು ವಿಕಸಿತವಾಗತೊಡಗಿತು. ಪರಾಗಕ್ಕೆ ತಿಳಿಯದೆಯೆ ಅದ ರಲ್ಲಿ ಪರಿಮಳವು ತುಂಬುವಂತೆ ನನ್ನ ಹೃದಯಪರಾಗದಲ್ಲಿ ಪರಿಮಳವು ತುಂಬಹತ್ತಿತು. ಮೇಘಗಳಿಗೆ ಗೊತ್ತಾಗದೆಯೆ ಅವುಗಳಿಗೆ ಬಣ್ಣವೇರುವಂತೆ ನನ್ನ ಅಂತರಂಗವು ರಂಗುರಂಗು ಗಳಿಂದೆಸೆಯತೊಡಗಿತು. ಸೂರ್ಯನು ಮೇಲಮೇಲಕ್ಕೆ ಬರುವಾಗ ಅವನ ತೇಜವು ಹಬ್ಬುವಂತೆ, ನನ್ನ ಅಣುಅಣು ಗಳಲ್ಲಿಯ ತೇಜವು ಹೊಮ್ಮತೊಡಗಿತು. ತಾಯಿಯ ತೊಡೆಯ ಮೇಲಿನ ಶಿಶು ಮೊಲೆವಾಲಿನ ಗುಟುಕನ್ನು ಎಡೆಬಿಡದೆ ಕೊಳ್ಳು ವಂತೆ, ನಾನು ಪ್ರಸನ್ನತೆಯ ಗುಟುಕುಗಳನ್ನು ಆಕಂಠವಾಗಿ ತೆಕ್ಕೊಳ್ಳತೊಡಗಿದೆನು. ಅಮೃತಝರಿಯ ಅಮೃತಸ್ಪರ್ಶ ದಿಂದ ನನ್ನ ಅಂಗಾಂಗವು ಪುಲಕಿತವಾಯಿತು. ನನ್ನ ಅಣು ಅಣುಗಳು ಪುಷ್ಪದಂತೆ ಅರಳಿದವು. ಆನಂದಾನುಭವದ ನೆರೆ

ಬಂದು ನಾನು ಅದರಲ್ಲಿ ಮುಳುಗಿಹೋದೆ. ಮನಸ್ಸು ಮುಗ್ಧವಾಯಿತು; ಕಣ್ಣು ಕುಕ್ಕಿತು; ವಾಣಿಯು ಮುಗ್ಧವಾಯಿತು; ಅರೆಮುಚ್ಚಿದ ಕಂಗಳಿಗೆ ಅಪಾರ ನೀಲಿಮೆಯು ಕಾಣಹತ್ತಿತು. ಆ ನೀಲಿಮೆಯಲ್ಲಿ ದಿವ್ಯ ಸುನೀಲಗಳು ತೋರಗತೊಡಗಿದವು. ಅದರಲ್ಲಿ ನಾನು ತದಾಕಾರಳಾಗಿರುವಾಗ ಭವ್ಯ ದಿವ್ಯ ಅಗಾಧ ಗಗನಪ್ರಾಂತವು ದೃಗ್ಗೋಚರವಾಗತೊಡಗಿತು. ಈ ಗಗನಪ್ರಾಂತದೊಳಗಿನ ಬಣ್ಣಗಳು ಕ್ಷಣಕ್ಷಣಕ್ಕೂ ಪಲ್ಲಟಿಸುತ್ತಿದ್ದವು. ಅಲ್ಲಿಯ ಮನೋಹರತೆಯನ್ನು ನೋಡುನೋಡುತ್ತಲೆ, ನಾನು ಗಗನರೂಪಳಾಗಿ ಗಗನದೊಡನೆ ಸಮರಸಳಾಗುತ್ತಿರುವಾಗ, ನೆರಳು ಕವಿದಂತಾಗಿ, ನೆರಳು ಬಂದೊಡನೆ ಬಿಸಿಲು ಎಲ್ಲಿ ಮರೆಯಾಗುವುದೋ, ಹೇಗೆ ಮರೆಯಾಗುವುದೋ ಗೊತ್ತಾಗದೆ ಹೋಗುವ ತೆರದಲ್ಲಿ ನನ್ನ ಮನವೂ ಗಮನವೂ—ಬಿಸಿಲು ಕರಗಿಹೋಗುವಂತೆ ಕರಗಿ ಹೋದವು; ಕರಗಿ ಎಲ್ಲಿ ಮಾಯವಾದವೋ ತಿಳಿಯದಂತಾಯಿತು. ನಿದ್ದೆಯೂ ಇಲ್ಲದ, ಎಚ್ಚರಿಕೆಯೂ ಇಲ್ಲದ ಸ್ಥಿತಿಯಲ್ಲಿ ನಾನಿದ್ದಾಗ ಒಮ್ಮೆಲೆ ಬೆಳಗಾದಂತಾಗಿ, ಸೂರ್ಯೋದಯವಾಯಿತು. ಗಗನಮಂಡಲದಲ್ಲಿ ಸುವರ್ಣಕಣಗಳ ತಳಿ ಚೆಲ್ಲಿತ್ತು.

ತೀವ್ರ ಶುಭ್ರ ತೇಜೋರಶ್ಮಿಗಳು ಗಗನಮಧ್ಯದಿಂದ ದೂರದೂರ ಹಬ್ಬಿದ್ದವು. ಧವಲ-ಹರಿತ-ಪೀತ-ಆರಕ್ತ ವರ್ಣಗಳ ಭವ್ಯವಲಯಗಳು ಗಗನಮಧ್ಯದ ಮೇಲೆ ಸಾವಕಾಶವಾಗಿ ತಿರುಗುತಿದ್ದವು. ಅವುಗಳ ಮಧ್ಯಭಾಗದಲ್ಲಿ ಉದಯಿಸುವ ಸೂರ್ಯನಂತೆ ರವಿಬಿಂಬವು ಪ್ರಕಾಶಿಸುತ್ತಿತ್ತು. ಭೂಲೋಕವನ್ನು ಬೆಳಗುವ ರವಿಗೆ ಪ್ರತಿಸ್ಪರ್ಧಿಯೆನಿಸುವಂತಹ, ಈ ಅಸ್ತಂಗತನಾಗದ ರವಿಯ ದರ್ಶನದಲ್ಲಿ ನಾನು ತಲ್ಲೀನಳಾಗಿ

ಹೋದೆ, ತದ್ರೂಪಳಾಗಿ ಹೋದೆ, ತದಾಕಾರಳಾಗಿ ಹೋದೆ ನಿದ್ದೆಯೊಳಗಿಂದ ಎಚ್ಚರಿಯುಸಂತೆ, ನಾನು ಎಚ್ಚರಿಕೆಯೊಳಗಿಂದಲೇ ಎಚ್ಚತ್ತೆ. ಕಣ್ಣು ತೆರೆದು ನೋಡುವಾಗ ಅಖಿಲ ಚರಾಚರವೇ ನನಗೆ ಪ್ರಾಣೇಶ್ವರ ರೂಪವಾಗಿ ತೋರತೊಡಗಿತು; ಅಂಗಾಂಗಗಳಲ್ಲಿ ನೆತ್ತರು ತುಂಬಿರುವಂತೆ, ಅಣುಕಣಗಳಿಂದ ವಿಶ್ವದ ತುತ್ತತುದಿಯ ವರೆಗೆ ಆತನೇ ತುಂಬಿತುಳುಕುತ್ತಿದ್ದುದು ಕಂಡಿತು. ಹಸನಾದ ಕನ್ನಡಿಯಲ್ಲಿ ಸ್ಪಷ್ಟ ಪ್ರತಿಬಿಂಬವು ಮೂಡುವಂತೆ, ನನ್ನ ಚಕ್ಷುಗಳಲ್ಲಿ ಆತನ ಚಿತ್ರವು ಮೂಡಿತು. ನನ್ನ ಹೃದಯವು ಆತನ ಸಿಂಹಾಸನವಾಯಿತು. ನನ್ನ ಅವಯವಗಳು ಅವನ ಪರಿಚಾರಕ-ಪರಿವಾರವಾಯಿತು. ನನ್ನ ಪ್ರಾಣೇಶ್ವರನು ತನ್ನಿಚ್ಛೆಯ ಮೇರೆಗೆ ನನಗೆ ಸಾಜಸಿಂಗಾರಗಳಿಂದ ಸುಶೋಭಿತಳನ್ನಾಗಿ ಮಾಡಿದನು. ವಿವೇಕವೃಕ್ಷದ ಮೇಲಿನ ಪಕ್ಷಿಗಳ ನುಡಿಗಳು ದಿಟವಾದವು.

# ಆಶೀರ್ವಾದ

ಆದೀಗ ವಸಂತಾಗಮವಾಗಿತ್ತು. ಉಪವನದ ಶೋಭೆಯು ಅಪೂರ್ವವಾಗಿತ್ತು. ದೀಪಾವಲಿಯ ದೀಪೋತ್ಸವದ ಚೆಲುವನ್ನು ನೋಡಿ ನಾವು ಆಶ್ಚರ್ಯಚಕಿತರಾಗುಪ್ಪದುಂಟು; ಆದರೆ ಉಪವನವನ್ನು ನೋಡಿದಾಗ ಅದಕ್ಕಿಂತಲೂ ಗಂಭೀರ ಆಶ್ಚರ್ಯವಾಗುತ್ತಿತ್ತು. ತರುಲತೆಗಳ ಸೌಭಾಗ್ಯವು ಮೇರೆ ಮೀರಿತ್ತು. ವಿಜಯಾದಶಮಿ, ದೀಪಾವಲಿ, ಯುಗಾದಿ ಮೊದಲಾದ ಹಬ್ಬಗಳಲ್ಲಿ, ನಮ್ಮ ಸುಮಂಗಲೆಯರು ಬೆಲೆ ಬಾಳುವ ಬಟ್ಟೆಬರೆ ವಸ್ತ್ರ-ಒಡವೆಗಳನ್ನು ಧರಿಸಿ, ಸುಹಾಸ್ಯ ವದನದಿಂದ, ಪ್ರಸನ್ನ ಮನಸ್ಸಿನಿಂದ ದೇಗುಲಗಳಿಗೆ ಹೋಗುವಾಗಿನ ರಮಣೀಯತೆಯನ್ನೂ ಈ ದೃಶ್ಯವು ಮೀರಿಸಿತ್ತು. ಉಪವನದಲ್ಲಿಯ ತರುಲತೆಗಳು ನಖಶಿಖಾಂತವಾಗಿ ಹಸಿರು ಬಣ್ಣದಲ್ಲಿ ತಮ್ಮನ್ನು ಅದ್ದಿಕೊಂಡು, ವಸಂತ ಮಹೋತ್ಸವದ ಮಾಂಗಲ್ಯವನ್ನು ತಮ್ಮ ಪ್ರಸನ್ನತೆಯಿಂದ, ಪ್ರಫುಲ್ಲತೆಯಿಂದ ಪ್ರದರ್ಶಿಸುತ್ತಿದ್ದವು. ಎತ್ತರವಾಗಿ ಬೆಳೆದ ಮರಗಳು ತಮ್ಮ ನಿಬಿಡ ಶಾಖೆಗಳಿಂದ ವಸಂತರಾಜನ ಹಸಿರು ಪತಾಕೆಗಳನ್ನು ಹಾರಿಸುತ್ತಿದ್ದವು.

ಹಸಿರುಸೆಲ್ಲೆ ಹೊತ್ತ ವನದೇವಿಯೊಡನೆ ಹರಿತ ಪೀತಾಂಬರಧಾರಿಯಾದ ವಸಂತರಾಜನು ಉಪವನದಲ್ಲಿ ವಿಹರಿಸುತ್ತ ತರುಲತೆಗಳ ಸ್ವಾಗತವನ್ನು ಸ್ವೀಕರಿಸುತ್ತ ಸಾಗಿದ್ದನು. ಈ ಮಹೋತ್ಸವವನ್ನು ನೋಡಲು ದೂರದೂರದ ವಿಹಗಗಳು ಬಂದಿದ್ದವು. ಕೋಕಿಲಗಳು ಕೂಜಿಸುತ್ತಿದ್ದವು. ಭಾರದ್ವಾಜ

ಗಳು ಗಂಭೀರ ಧ್ವನಿ ಮಾಡುತ್ತಿದ್ದವು ಗಿಳಿಗಳು ಇತ್ತಿತ್ತಿ ಅತ್ತಿತ್ತ ನೋಡುತ್ತಿದ್ದವು.

ವಸಂತರಾಜನ ಕೃಪಾವೃಷ್ಟಿಯು ಅವಿರತವಾಗಿ ಸಾಗಿತ್ತು. ಅವನ ಕೃಪಾದೃಷ್ಟಿಯಿಂದ ತರುಲತೆಗಳು ಹೊಸಹೊಸಗೆಯಿಂದ ತುಂಬಿತುಳುಕಾಡುತ್ತಿದ್ದವು. ಧನಿಕನೊಬ್ಬನು ಕೊಡುಗೈಯಿಂದ ದಾನ ಮಾಡುತ್ತಿರುವಾಗ ದರಿದ್ರನೊಬ್ಬನ ಮನಸ್ಸು ಆಶೆಯಿಂದ ಅತ್ತ ಧಾವಿಸುವಂತೆ, ಉಪವನದ ಬೇಲಿಯ ಹತ್ತರ ಒಂದು ನಿಡಿದಾದ ರೆಂಬೆಯ ಮೇಲೆ ಒಂದೇ ಒಂದಾಗಿರುವ, ಉದುರಿಬೀಳಲನುವಾಗಿರುವ ಪುಷ್ಪವೊಂದು ಆ ಸಡಗರವನ್ನು ನೋಡುತ್ತ ತೀವ್ರ ಆಶೆಯನ್ನಿಟ್ಟುಕೊಂಡಿತ್ತು.

ತರುಲತೆಗಳಿಗೆ ನವಪಲ್ಲವಗಳನ್ನಿತ್ತು ಹೊಸಹೊಸಗೊಳಿಸುವ ವಸಂತಮಹಾರಾಜನ ಕೃಪಾದೃಷ್ಟಿಯಿಂದ ತನಗೂ ನವಜೀವನವು ಪ್ರಾಪ್ತವಾದೀತೆಂಬ ಆಶೆಯಿಂದ, ನಂದಿ ಹೋಗುತ್ತಿರುವ ಪುಷ್ಪದ ಜೀವನ-ಜ್ಯೋತಿಯು ಇನ್ನೂ ಮಿಣಿ ಮಿಣಿ ಉರಿಯುತ್ತಲಿತ್ತು. ವಸಂತರಾಜನ ಔದಾರ್ಯವನ್ನು ನಂಬಿಕೊಂಡು ಇನ್ನೂ ಅದು ಜೀವಹಿಡಿದುಕೊಂಡಿತ್ತು. ಅವನ ಕೃಪೆಯಾದೀತೆಂದು ಅದು ಕ್ಷಣಕ್ಷಣವನ್ನೂ ಎಣಿಸುತ್ತಿತ್ತು. ಆದರೆ ಅದರ ಮನದಾಶೆ ಕರಗುತ್ತ ನಡೆಯಿತು, ಶಕ್ತಿ ಕ್ಷೀಣಿಸ ತೊಡಗಿತು. ತರುಲತೆಗಳ ಮೇಲೆ ಕೃಪೆಯ ಸುರಿಮಳೆಯನ್ನೇ ಮಾಡುವ ವಸಂತರಾಜನು ತನಗೆ ಜೀವದಾನವನ್ನು ಮಾಡುತ್ತಿಲ್ಲವಲ್ಲ—ಎಂಬ ನಿರಾಶೆಯಿಂದ ಅದರ ಕೋಮಲ ಅಂತಃಕರಣಕ್ಕೆ ತೀವ್ರ ಆಘಾತವಾಯಿತು. ಬಿರುಗಾಳಿಯ ಸೆಳೆತಕ್ಕೆ ರೆಂಬೆಕೊಂಬೆಗಳು ಸಿಕ್ಕಿದತ್ತ ತೂಗಾಡುವಂತೆ ಅದರ ಮನಸ್ಸೂ ನಿರಾಶೆಯಿಂದ ಉಯ್ಯಾಲೆಯಾಡತೊಡಗಿತು.

ಸಮದೃಷ್ಟಿಯು ವಸಂತರಾಜ್ಯದಲ್ಲಿಯೂ ಭೇದಭಾವವಿದೆ ಯಲ್ಲಾ ಎಂದು ಪುಷ್ಪಕ್ಕನಿಸತೊಡಗಿತು. ವಿವಾಹ ಮಹೋತ್ಸವದಲ್ಲಿ ಬೀಗಬಿಜ್ಜರಿಗಷ್ಟೇ ಉಡುಗೊರೆ ಮಾಡಲಾಗುವಂತೆ, ವಸಂತರಾಜ್ಯದಲ್ಲಿಯೂ ಪಕ್ಷಪಾತವು ಪುಷ್ಪಕ್ಕೆ ತೋರ ಹತ್ತಿತು. ಅದರ ದುಃಖಕ್ಕೆ ಎಣೆಯಿಲ್ಲದಾಯಿತು. ತನ್ನ ದಃಖವನ್ನು ಅದು ಯಾರ ಮುಂದೆ ತೋಡಿಕೊಳ್ಳಬಲ್ಲದು? ಅದನ್ನು ಸಂತೈಸುವವರು ಯಾರು? ಕೈಯೊಳಗಿನ ಅಮೌಲ್ಯ ವಸ್ತು ಆಳನೀರಿನಲ್ಲಿ ಬಿದ್ದಾಗ ಮನಸ್ಸಿಗನಿಸುವಂತೆ ಪುಷ್ಪಕ್ಕಾ ಯಿತು. ಕ್ಷೀಣವಾದ ಪುಷ್ಪದ ಪಕಳೆಗಳೆಲ್ಲ ಉದುರಿಹೋಗಿ ದೇಟಿನೊಂದಿಗ ಕೇಸರಗಳ ಪಂಜರಮಾತ್ರ ಉಳಿಯಿತು. ಪುಷ್ಪದ ಆ ವಿರೂಪಸ್ಥಿತಿಯನ್ನು ನೋಡಿ ನವಯೌವನಸಂಪನ್ನ ಪರ್ಣಗಳು ಖೋಖೋ ನಕ್ಕುವು. ಆ ಉಪಹಾಸದ ವಿಕಟ ಹಾಸ್ಯ ಕೇಳಿ ಪುಷ್ಪದ ದುಃಖಕ್ಕೆ ಮೇರೆಯಿಲ್ಲದಾಯಿತು. ನಟ್ಟ ಬಾಣವು ಒಳಕ್ಕೆ ಆಳವಾಗಿ ಹೊಕ್ಕು ನೋವು ಕೊಡುವಂತೆ ಪುಷ್ಪಕ್ಕಾಯಿತು ವಸಂತರಾಜನಿಂದ ಪುನರ್ಜೀವನವು ಪ್ರಾಪ್ತವಾಗಲಿಲ್ಲವೆಂಬ ನೋವಿಗಿಂತ ಹೆಚ್ಚಿನ ನೋವು ಆ ಉಪಹಾಸದ ಹಾಸ್ಯದಿಂದ ಪುಷ್ಪಕ್ಕಾಯಿತು. ವಸಂತರಾಜನ ರಾಜ್ಯದಲ್ಲಿಯೂ ಅನ್ಯಾಯವಿದೆಯೆಂಬ ವಿಚಾರವು ಪುಷ್ಪಕ್ಕೆ ಅಸಹ್ಯವಾಯಿತು.

ಅಣಕದ ನಗೆಯು ಕಣೆಯು ಎದೆಯಲ್ಲಿ ಇನ್ನೂ ನಟ್ಟಿರುವಾಗಲೇ ಪುಷ್ಪವು ಗತಪ್ರಾಣವಾಯಿತು. ಅದರ ಪಕಳೆಗಳು ಬಿಸಿಲಿನಿಂದ ಒಣಗಿಹೋಗಿ, ಮಣ್ಣಿನೊಡನೆ ಮಣ್ಣಾಗಿ ಹೋದವು. ಆ ಸುಶೋಭಿತ ಉದ್ಯಾನದಲ್ಲಿ ಆ ಪುಷ್ಪದ ಅವಶೇಷವಾವುದೂ ಉಳಿಯಲಿಲ್ಲ. ಆದರೆ ಅದರ ಕಾಯೊಡನೆ

ಆದರೆ ತೀವ್ರ ವ್ಯಥೆಯು ನಷ್ಟವಾಗಲಿಲ್ಲ; ಅದು ಅಸ್ಪೃಶ್ಯರೂಪ ದಲ್ಲಿ, ಉಪವನದಲ್ಲಿ, ಉಪವನದ ಹೊರಗೆ ಎಲ್ಲಕಡೆಗೂ ತಿರುಗ ತೊಡಗಿತು. ಎರಡು ಮಂಗುಗಳು ಜಗಳಾಡುತ್ತಿರುವಾಗ ತಾಯಿ ಬಂದು ನಿಜವಾದ ನ್ಯಾಯು ಕೊಟ್ಟು, ನಿರಪರಾಧಿ ಬಾಲಕನನ್ನು ಸಾಂತ್ವನಗೊಳಿಸಿ, ಅಪರಾಧಿ ಬಾಲಕನನ್ನು ಶಿಕ್ಷಿಸುವಂತೆ ತನಗೂ ನ್ಯಾಯು ದೊರಕಬೇಕು ಎಂಬ ಇಚ್ಛೆ ತೀವ್ರವಾಗಿರುವಾಗಲೇ ಪುಷ್ಪವು ಗತಪ್ರಾಣವಾಗಿತ್ತು. ನ್ಯಾಯಕ್ಕಾಗಿ ಪುಷ್ಪಕ್ಕೆ ಅರ್ಜಮಾಡಿಕೊಳ್ಳಬೇಕಾಗಿತ್ತು. ಆದರೆ ಭೂಮಿಯೇ ಎದ್ದು ಬಡಿದರೆ, ರಾಜನೇ ಹೊಂದಬ್ಬಿ ದರೆ ನ್ಯಾಯು ಬೇಡುವುದಾದರೂ ಯಾರಲ್ಲಿ ? ಪರ್ಣಗಳೆಸಗಿದ ಅನ್ಯಾಯುದ ಬಗ್ಗೆ ತರುಲತೆಗಳ ಮುಂಪೆ ದೂರಿಕೊಳ್ಳಬೇಕಂ ದರೆ, ಅವೆಲ್ಲ ತಮ್ಮ ಬಡಿವಾರದಲ್ಲಿಯೇ, ತಮ್ಮ ಬೆಡಗು-ಬಿನ್ನಾಣದಲ್ಲಿಯೇ ಮೈಮರೆತಿವೆ! ಪರ್ಣಗಳ ಉದ್ಧಟತನ ವನ್ನು ಒಪ್ಪಿಕೊಳ್ಳುವಷ್ಟು ನಿಃಸ್ಪೃಹತೆ ಆ ತರುಲತೆಗಳಲ್ಲಿಲ್ಲ ದಿದ್ದರೆ....?

ಎಳೆಮಕ್ಕಳು ಪಾಟಿಯ ಮೇಲೆ, ಕಾಗದದ ಮೇಲೆ ಏನಾ ದರೂ ಗೀಚುವವು, ಏನೋ ಒಂದು ಸಂಕೇತವೆಂದು ಅವು ತಿಳಿಯುವವು; ಅದೇ ಮೇರೆಗೆ ಹಲವು ವಿಚಾರಗಳ ಅಸ್ಪಷ್ಟ ಮುದ್ರೆಯು ಸುಮಹೃದಯುದಲ್ಲಿ ಮೂಡಿತ್ತು. ಆ ತೀವ್ರ ಇಚ್ಛೆಗಳು ಹೊಸದಾದ ಸೂಕ್ಷ್ಮದೇಹವನ್ನು ಧರಿಸಿದವು; ಆ ಅತೃಪ್ತ ಇಚ್ಛೆಗಳನ್ನು ತೃಪ್ತಗೊಳಿಸಲು ಸೂಕ್ಷ್ಮದೇಹವು ಎಲ್ಲಕಡೆಗೆ ಸಂಚರಿಸತೊಡಗಿತು.

ಸುಟ್ಟ ಬೊಟ್ಟಿನ ಮೇಲೆ 'ಉಫ್' ಎಂದು ಊದಿದರೆ ಆದಕ್ಕೆ ತಣ್ಣಗೆನಿಸುವಂತೆ, ಪುಷ್ಪದ ಬೆಂದ ನೊಂದ ಹೃದ

ಯಕ್ಕೆ ತಣಿವನ್ನೀಯಲು ಪ್ರೇಮದ ತಣ್ಣನೆಸಿರು ಬೇಕಿತ್ತು. ಉರಿಬಿಸಿಲ ಬೇಗೆಯನ್ನು ಜಲದಗಳಿಂದ ಸುರಿಯುವ ವೃಷ್ಟಿ ಆರಿಸುವಂತೆ, ಪುಷ್ಪದ ದುಃಸಹತೆಯನ್ನು ಹೋಗಲಾಡಿಸುವ ಕಾರುಣ್ಯದ ವೃಷ್ಟಿಯು ಬೇಕಿತ್ತು. ವ್ಯಥಿತ ಬಾಲಕನಿಗೆ ಮಾತೆಯ ಆಲಿಂಗನವು ಸುಖದವಾಗಿರುವಂತೆ ಪುಷ್ಪಕ್ಕೂ ಸೌಖ್ಯಮಯ ವಾತ್ಸಲ್ಯದ ಆಲಿಂಗನವು ಬೇಕಿತ್ತು. ದಣಿದ ದಾರಿಗನಿಗೆ ನೆರಳು ವಿಶ್ರಾಂತಿಯನ್ನೀಯುವಂತೆ, ಮನತಣಿಸುವ ನೆರಳು ಪುಷ್ಪಕ್ಕೂ ಬೇಕಿತ್ತು.

ಬಾಯಾರಿಕೆಯಿಂದ ಬಳಲಿದ ಮಾನವನು ನೀರನ್ನು ಶೋಧಿಸುತ್ತಿರುವಂತೆ ಪುಷ್ಪವು ನ್ಯಾಯ ದೊರಕಿಸಲು ನ್ಯಾಯದಾತೃವನ್ನು ಶೋಧಿಸುತ್ತ ಹೊರಟಿತು ಹಾದಿಯಲ್ಲಿ ಅದಕ್ಕೆ ಹಗಲಿನ ಭೆಟ್ಟಿಯಾಯಿತು ಹಗಲಿನ ಮುಂದೆ ಪುಷ್ಪವು ತನ್ನ ಕರುಣಕಥೆಯನ್ನು ಹೇಳಿತು. ಎಲ್ಲ ಕೇಳಿಕೊಂಡು ಹಗಲು ಸಹಾನುಭೂತಿ ತೋರಿಸುತ್ತ ಇಂತು ಹೇಳಿತು — “ಪ್ರಿಯ ಪುಷ್ಪವೇ, ನಿನ್ನ ಜೀವನವು ನಿರುಪದ್ರವಿ! ನಿನಗೆ ಇಷ್ಟು ಕಠೋರ ನ್ಯಾಯವು ಏಕೆ ಸಿಕ್ಕಿತು? ಈ ಭೂಲೋಕದಲ್ಲಿ ಸತ್ಯಕ್ಕೆ ಬೆಲೆಯೇ ಇಲ್ಲ. ಆದರೂ ಸತ್ಯವು ಒಮ್ಮಿಲ್ಲೊಮ್ಮೆ ಗೆಲ್ಲಲೇಬೇಕು. ಈ ಅನ್ಯಾಯ ನೋಡಿ ಬಾಳೇ ಬೇಸರವಾಗಿದೆ ನನಗೆ! ಯಾರಿಗೆ ಏನು ಮಾತನಾಡಿದರೂ ಪ್ರಯೋಜನವಿಲ್ಲ. ನೋಡಿ ತೆಪ್ಪಗೆ ಕೂಡಬೇಕು! ಅಪ್ಪಣೆಯಂತೆ ನಡೆಯುವ ಜನ ನಾವು! ದಾರಿಯ ಬದಿಯ ಕಂದೀಲಿನ ಬೆಳಕಿನಲ್ಲಿ ಸಜ್ಜನರು ಮಾರ್ಗ ಕ್ರಮಿಸುವಂತೆ, ಕಳ್ಳರೂ ತಮ್ಮ ಕಾಯಕಕ್ಕಾಗಿ ಹಾದಿ ಹಿಡಿದು ಹೋಗುವರು! ಇದು ಭೂತಲದ ರೀತಿ. ಇದು ನೋಡು—ಎಲ್ಲರನು ಕಾರ್ಯ

ಪ್ರವೃತ್ತರನ್ನಾಗಿ ಮಾಡುವುದು ನನ್ನ ಕೆಲಸ; ಆ ಬೆಳಕಿನಲ್ಲಿಯೂ ನ್ಯಾಯ-ಅನ್ಯಾಯಗಳು ನಡೆದೇ ಇವೆ. ನಿನ್ನಂತಹ ನಿರಪರಾಧಿಯ ಮೇಲೆ ಅದೆಂತಹ ಅನ್ಯಾಯವಿದು! ವರಿಷ್ಠರ ಕಡೆಗೆ ಹೋಗಿ ದೂರು ಹೇಳು ಹೋಗು! ಸುಮ್ಮನೆ ಕುಳಿತರೆ ಅನ್ಯಾಯಗಳು ಜಗತ್ತಿಗೆ ಗೊತ್ತಾಗಲಾರವು; ಅನ್ಯಾಯದ ಪ್ರವೃತ್ತಿಯು ಕಡಿಮೆಯಾಗದೆ ಅದು ಬೆಳೆಯುತ್ತಲೇ ಹೋಗುವುದು.'' ಹೀಗೆನ್ನುತ್ತ ಹಗಲಣ್ಣನು ಮುಂದೆ ಸಾಗಿದನು.

ಹಗಲಿನ ಸಹಾನುಭೂತಿಯಿಂದ ಪುಷ್ಪಕ್ಕೆ ಎಷ್ಟೋ ಹಾಯೆನಿಸಿತು. ಮುಂದೆ ರಜನಿ ಭೆಟ್ಟಿಯಾದಳು. ಮಗುವಿಗೆ ನಿದ್ದೆ ಬರಲೆಂದು ತಾಯಿ ಜೋಗುಳ ಹೇಳುವಂತೆ ರಜನೀಮಾತೆಯು ಸಕಲರಿಗೂ ನಿದ್ದೆ ಬರಲೆಂದು ಮಧುರರವದಿಂದ ಲಾಲಿ ಹಾಡುತ್ತಿದ್ದಳು. ಅಪರಾತ್ರಿಯಲ್ಲಿ ಪುಷ್ಪವು ತಿರುಗಾಡುತ್ತಿರುವುದನ್ನು ನೋಡಿ ರಜನಿಯು ತುಂಬಾ ಕಳಕಳಿಯಿಂದ ಮಾತನಾಡಿಸಿದಳು. ತಾಯಿಯ ಬಳಿ ಕೂಸು ನಿಃಸಂಕೋಚವಾಗಿರುವಂತೆ ಪುಷ್ಪವು ರಜನಿಯ ಸನ್ನಿಧಿಯಲ್ಲಿ ನಿಂತು ತನ್ನ ಕಥೆ ಹೇಳಿತು. ಅದನ್ನು ಕೇಳಿ ರಜನೀಮಾತೆಯೆಂದಳು:-

"ಪುಷ್ಪವೇ! ಸುಗಂಧಮಯವು ನಿನ್ನ ಜೀವನ! ಎಲ್ಲರಿಗೂ ಬೇಕಾದವ ನೀನು! ನಿನಗೆ ಎಲ್ಲಿಯೂ ಪ್ರತಿಬಂಧವುಂಟಾಗಲಾರದು. ನಿನ್ನ ಚಾರಿತ್ರ್ಯವು ನಿಷ್ಕಲಂಕ! ನಿನಗೆ ಸರಿಯಾದ ನ್ಯಾಯವು ದೊರೆಯಲೇಬೇಕು. ಧೈರ್ಯಬಿಡದೆ ಅಲ್ಲಿಯವರೆಗೂ ಹೋಗು. ಭೂಲೋಕದಲ್ಲಿಯ ಕಾನೂನುಗಳಂತೆ ಅಲ್ಲಿಯ ಕಾನೂನುಗಳಿಲ್ಲ. ಚಿಕ್ಕವರಿಂದ ದೊಡ್ಡವರವರೆಗೆ ಎಲ್ಲರೂ ನಿಯಮಗಳಿಂದ ಬದ್ಧರಾಗಿರುವರು. ನಿಸರ್ಗದ

ನ್ಯಾಯದ ತಕ್ಕಡಿಯು ಇನಿಸೂ ತಪ್ಪದಂತೆ ಎಲ್ಲವನ್ನೂ ತೂಗುವುದು.” ರಜನಿಯ ಅಂತಃಕರಣದ ಮಾತುಗಳನ್ನು ಕೇಳಿ ಪುಷ್ಪದ ಶಂಕೆಗಳೆಲ್ಲ ದೂರವಾಗಿ ಅದು ಮುಂದೆ ಸಾಗ ಹತ್ತಿತು.

ಪರ್ಜನ್ಯದ ಜಲಧಾರೆಗಳು ಭೂಮಿಯ ಮೇಲೆ ಬರಲು ಹೊರಟಿದ್ದವು. ಅವು ಪುಷ್ಪದ ಕುಶಲವಾರ್ತೆಯನ್ನು ಕೇಳಿದವು. ಅದು ತನ್ನ ಕಥೆ ಹೇಳಿತು. ಜಲಧಾರೆಗಳು ಅನುತಾಪ ಸೂಚಿಸಿ, ಅಷ್ಟದಿಕ್ಪಾಲಕರಿಗೆ ಬೆಟ್ಟಿಯಾಗಬೇಕೆಂದು ಪುಷ್ಪಕ್ಕೆ ಸೂಚಿಸಿದವು ಪುಷ್ಪವು ಅಷ್ಟದಿಕ್ಪಾಲಕರ ಬಳಿ ಹೋಯಿತು. ಅವರ ಆಗಮನದ ಕಾರಣ ಕೇಳಿಕೊಂಡು ಅವರೆಂದರು—“ಮಧುರ ಕುಸುಮವೇ! ನಿನ್ನ ನಿಷ್ಕಲಂಕ ಜೀವನವನ್ನು ನೋಡಿದ ಪರ್ಣಗಳು ಅಣಕದಿಂದ ನಗಬಾರದಿತ್ತು. ಅದು ತುಂಬಾ ಅನುಚಿತ ಕೃತಿ. ನಿಷ್ಪಾಪತೆಗೆ ನಿಸರ್ಗದ ಓಲಗದಲ್ಲಿ ಬಹಳ ದೊಡ್ಡ ಪಾರಿತೋಷಿಕವಿದೆ. ನಿಸರ್ಗದ ನ್ಯಾಯಾಲಯದಲ್ಲಿಯೇ ನಿಜವಾದ ನ್ಯಾಯವು ದೊರಕುವುದು. ಸೃಷ್ಟಿ ಚಕ್ರವು ಕ್ರಮಬದ್ಧವಾಗಿ ನಡೆಯಲು ಬೇರೆ ಬೇರೆ ದೇವತೆಗಳಿಗೆ ಅವರವರಿಗುಚಿತವಾದ ಕಾರ್ಯಗಳನ್ನು ಒಪ್ಪಿಸಲಾಗಿದೆ. ಆಯಾ ಕ್ಷೇತ್ರಗಳಲ್ಲಿಯ ದೇವತೆಗಳು ತಂತಮ್ಮ ಕಾರ್ಯವನ್ನು ನಿರ್ವಹಿಸುವವು. ನಿನಗೆ ನನ್ನ ಪೂರ್ಣ ಸಹಾನುಭೂತಿಯಿದೆ. ಉಚ್ಚಾಧಿಕಾರಿಗಳಾದ ದಿನಕರ-ಶಶಿನಾಥರನ್ನು ಸಂಧಿಸು. ಅವರು ನಿನಗೆ ಯೋಗ್ಯ ಸೂಚನೆಗಳನ್ನು ಮಾಡುವರು.”

ಪುಷ್ಪವು ಚಂದಿರನನ್ನು ಕಂಡಿತು. ಆತನು ಪುಷ್ಪದ ಕಥೆ ಕೇಳಿ ಎಂದನು.—“ನಾವು ಎಷ್ಟೇ ದೊಡ್ಡ ಅಧಿಕಾರಿಗಳಿದ್ದರೂ, ಮಾಂಡಲಿಕ ರಾಜರು. ಸಾರ್ವಭೌಮ ರಾಜನ

ಆಜ್ಞೆಯ ಮೇರೆಗೆ ರಾಜ್ಯ ನಡಸುವವರು. ರಾಜಾಧಿರಾಜನ ಆಜ್ಞೆಯನ್ನು ಮೀರಿ ನಾವೇನೂ ಮಾಡಲಾರೆವು. ಸೃಷ್ಟಿಯ ಸುರಾಜ್ಯವು ಸಾಗಲು ನಾವು ರಾಜನಿಷ್ಠರೂ ಕರ್ತವ್ಯನಿಷ್ಠರೂ ಕಾರ್ಯನಿಷ್ಠರೂ ಆಗಿರಲೇಬೇಕು—ಇದು ಇಲ್ಲಿಯ ಕರಾರು. ನಿನಗೆ ನನ್ನ ಪೂರ್ಣ ಸಹಾನುಭೂತಿಯಿದೆ. ನೀನು ರಾಜರಾಜೇಶ್ವರನನ್ನು ಕಾಣು!"

ಪುಷ್ಪವು ಮುಂದೆ ದಿನಕರನನ್ನು ಕಂಡಿತು. ನಗೆಮೊಗದಿಂದ ಅವರ ಹೇಳಿಕೆಯನ್ನು ಕೇಳಿ, ಹಸಿದ ಕರುವಿನ ಕಡೆಗೆ ಆವು ನೋಡುವಂತೆ ಒಲವುದುಂಬಿದ ಕಣ್ಣುಗಳಿಂದ ಪುಷ್ಪವನ್ನು ನೋಡುತ್ತ ದಿನನಾಥನೆಂದನು — "ಮಗೂ, ದಾನವನ್ನು ಯಜಮಾನನಲ್ಲಿಯೇ ಕೇಳಬೇಕು. ದಯಾರ್ದ್ರನಾದ ಯಜಮಾನನು ಮುಕ್ತಹಸ್ತದಿಂದ ಕೊಡುವನು. ಆಳುಮಗನ ಕೈ ಸಣ್ಣದು! ಸಣ್ಣಮನಸ್ಸಿನ ಜಗತ್ತು ಸಣ್ಣದು; ಅದೇ ಮೇರೆಗೆ ಸಣ್ಣ ಕೈಯ ದಾನ ಸಣ್ಣದು! ಪ್ರಭುವಿನ ರಾಜ್ಯದಲ್ಲಿ ನಿರ್ಮಲರಿಗೆ ಶ್ರೇಷ್ಠ ಸ್ಥಾನವಿದೆ. ನಿನ್ನ ಜೀವನವು ಪರಮ ಪವಿತ್ರ; ನೀನು ನಿಶ್ಚಿಂತನಾಗಿ ಪ್ರಭುವಿನ ಪ್ರಾಸಾದದಲ್ಲಿ ಹೋಗಿ, ಆ ದಿವ್ಯಚರಣಗಳನ್ನು ಹಿಡಿ. ಕರುಣಾಸಾಗರನಲ್ಲಿ ಕರುಣೆಗೇನು ಕೊರತೆ? ದಯಾಮಯನು ದಯೆಯನ್ನು ಸೂರೆಗೈಯದೆ ಏನು ಮಾಡಿಯಾನು?" ಸೂರ್ಯದೇವನ ವಚನಗಳಿಂದ, ಯೋಧನಿಗೆ ರಣಗಹಳೆಯ ಧ್ವನಿಯಿಂದ ಉಂಟಾಗುವ ಸ್ಫೂರ್ತಿಗಿಂತಲೂ ಹೆಚ್ಚಿನ ಸ್ಫೂರ್ತಿಯನಿಸಿ, ಪುಷ್ಪವು ಪ್ರಭುವಿನ ಪ್ರಾಸಾದದತ್ತ ಹೊರಳಿತು.

ಹಾದಿಯಲ್ಲಿ ಪವನರಾಜನ ಬೆಟ್ಟಿಯಾಯಿತು. ಆತನು ಘೊ–ಘೊ ಸಪ್ಪಳ ಮಾಡುತ್ತ ಸೂಕ್ಷ್ಮರೀತಿಯಲ್ಲಿ ನಿಸರ್ಗದ

ಸಂದೇಶವನ್ನು ಬೀರುತ್ತಿದ್ದನು. ಸೂಚಕಧ್ವನಿಯಿಂದ ಅಲ್ಲಿಯ ನಿಯಮಗಳನ್ನು ಸಾರುತ್ತಿದ್ದನು. ಪಕ್ಷಿಗಳ ಭಾಷೆಯನ್ನು ಹಕ್ಕಿಗಳೇ ತಿಳಿದುಕೊಳ್ಳುವಂತೆ, ಇರುವೆಗಳ ಮನದಿಚ್ಛೆಯನ್ನು ಇರುವೆಗಳೇ ಗುರುತಿಸುವಂತೆ, ಪ್ರೇಮದ ಹಸಿವು ಪ್ರೇಮಕ್ಕೇ ಗೊತ್ತಾಗುವಂತೆ; ನಿಸರ್ಗರಾಜ್ಯದ ಕಾನೂನುಗಳನ್ನು ನಿಸರ್ಗದ ಅಧಿಕಾರೀವರ್ಗಕ್ಕೆ ತಿಳಿಸಲೋಸುಗ, ನಿಸರ್ಗದ ಸಾಂಕೇತಿಕ ಭಾಷೆಯಲ್ಲಿಯೇ ಪವನದೇವನು ಹೇಳುತ್ತಿದ್ದನು. ತನ್ನ ಸೈನ್ಯದ ಚಲನವಲನೆಗಳು ಪರಕೀಯ ಸೈನ್ಯಕ್ಕೆ ತಿಳಿಯಬಾರದೆಂದು ಸಾಂಕೇತಿಕ ಸೂಚನೆಗಳಿಂದ ತಮ್ಮ ಸಂದೇಶಗಳನ್ನು ತಮ್ಮ ಸೇನಾಧಿಕಾರಿಗಳಿಗೆ ತಿಳಿಸುತ್ತಿರುವಂತೆ, ಅದಕ್ಕೂ ಹೆಚ್ಚಿನ ಎಚ್ಚರಿಕೆಯಿಂದ ಪವನರಾಜನು ಸಂದೇಶಗಳನ್ನು ಬೀರುತ್ತಿದ್ದನು.

ತನ್ನ ಕಾರ್ಯವನ್ನು ನಡೆಯಿಸುತ್ತಲೇ ಪವನದೇವನು ನಗುಮೊಗದಿಂದ ಪುಷ್ಪವನ್ನು ಬರಮಾಡಿಕೊಂಡನು. ಪುಷ್ಪವು ಕೇಳಿತು—"ಇದೆಂಥ ಗಾನ ನಿಮ್ಮದು? ಆರೋಹ-ಅವರೋಹಗಳಿಲ್ಲದ ಈ ರಾಗವು ಯಾವುದು? ಎಷ್ಟು ಅಸ್ಪಷ್ಟ ನಿನ್ನೀ ಮಾತು? ಸ್ವಗತ ಭಾಷಣವು ಕೂಡ ಇದಕ್ಕಿಂತ ಸ್ಪಷ್ಟವಾಗಿರುತ್ತದೆ!" ಮಿತ್ರನು ಮಿತ್ರನ ತೋಳನ್ನು ಸಲಿಗೆಯಿಂದ ಹಿಡಿದು ಅಲುಗಾಡಿಸುವಂತೆ, ಪವನನು ಪುಷ್ಪವನ್ನು ಮೈದಡಹುತ್ತ ಇಂತೆಂದನು- "ಗೆಳೆಯಾ, ಈ ಅಸ್ಪಷ್ಟ ಉದ್ಗಾರಗಳ ಹಿಂದೆ ಏನಾದರೂ ಅಡಗಿರುತ್ತದೆಂಬುದು ನಿನಗೆಂತು ತಿಳಿಯುವುದಿಲ್ಲ? ಇಷ್ಟು ಉನ್ನತ ಮಾರ್ಗದಿಂದ ನೀನು ಇಲ್ಲಿ ಬಂದುದಾದರೂ ಏಕೆ?' ಪುಷ್ಪವೊಮ್ಮೆಲೆ ಉದ್ಗರಿಸಿತು — "ನಾನು ತೀರಾ ಸರಲಮಾರ್ಗದಿಂದ

ಬಂದೆ." ಪವನನೆಂದನು—"ಇಲ್ಲಿಯವರೆಗೆ ಬಂದು, ನಾನು ಏನು ಮಾಡುತ್ತಿರುವೆನೆಂಬುದನ್ನು ತರ್ಕದಿಂದ ತಿಳಿದುಕೊಳ್ಳ ಬಾರದೇ? ಹೆಚ್ಚಿನವ ನೀನು! ತನ್ನ ಸೀಮೆ ದಾಟಿ ಹೋದ ಮೇಲೆ ನಿರೀಕ್ಷಣ ಶಕ್ತಿ ತಾನೇ ಕುದುರುತ್ತದೆ; ವಿಚಾರದಾ ಉಗಮದತ್ತ ಹೋದೊಡನೆ ಗುಟ್ಟು ತಾನೇ ಆಕಲನವಾಗ ತ್ತದೆ. ಹುಟ್ಟಿಬಂದು ನೀನು ಕಲಿತುದಾದರೂ ಏನು?"

ಪುಷ್ಪವೆಂದಿತು—"ಸರಿತ್ತಿಗೆ ಹರಿಯುವುದೊಂದೇ ಗೊತ್ತು, ಹಾಗೆಯೇ ನನಗೆ ಪ್ರಸನ್ನತೆ-ಪ್ರಫುಲ್ಲತೆಯೊಂದೇ ಗೊತ್ತು. ಜೇನುಹುಟ್ಟಿನಲ್ಲಿಯ ಜೇನಿಗೆ ಮಾಧುರ್ಯಕ್ಕಾಗಿ ಜಗತ್ತಿನ ಕಡೆಗೆ ನೋಡುವ ಅಗತ್ಯವಿಲ್ಲವಷ್ಟೇ! ಪ್ರಫುಲ್ಲತೆ-ಪ್ರಸನ್ನತೆ ಯಲ್ಲಿ ತರ್ಕವಿತರ್ಕಕ್ಕೆ ಸ್ಥಾನವೆಲ್ಲಿ? ಭೂತಾಯಿ ನನ್ನನ್ನು ಬೆಳಸಿದಳು, ಮಳೆರಾಯ ಬಾಯಾರಿಕೆಯನ್ನು ಹಿಂಗಿಸುತ್ತಿದ್ದ! ಹೊಟ್ಟೆ ತುಂಬಿದ ಮೇಲೆ ಬುತ್ತಿಯನ್ನು ಯಾರಾದರೂ ಮತ್ತೂ ಕಟ್ಟಿಕೊಂಡಿರುವರೇ? ಅತ್ಯಾನಂದದಿಂದ ತೂಗಾಡುವುದೇ ನನ್ನ ಜೀವನವಾಗಿದೆ! ತಾಯಿಯ ತೊಡೆಯ ಮೇಲೆ ಬಿದ್ದು ಕೊಂಡು ಮೊಲೆವಾಲು ಕುಡಿಯುತ್ತಿರುವ ಕೂಸಿಗೆ ತಾನೆಂತು ಬೆಳೆದೇನು ಎಂಬುದರ ಚಿಂತೆ ಇರುವುದೇ? ಆನಂದವೇ ಆನಂದ! ಸುತ್ತೂ ಮುತ್ತೂ ಎತ್ತೆತ್ತಲೂ ಆನಂದ!"

ಪವನದೇವನೆಂದನು—"ಗೆಳೆಯಾ, ನಿನ್ನ ಮಾತು ನಿಜ. ಆದರೆ ನಾವು ಎಚ್ಚರಿಕೆಯಿರುವಷ್ಟು ಕಾಲದಲ್ಲಿಯೇ ಉನ್ನತಿ ಯನ್ನು ಮಾಡಿಕೊಳ್ಳಬಲ್ಲೆವು. ನಿದ್ದೆಯಲ್ಲಿ ನಮ್ಮ ಜ್ಞಾನೇಂ ದ್ರಿಯ-ಕರ್ಮೇಂದ್ರಿಯಗಳು ಕೆಲಸಮಾಡದೆ ಸುಮ್ಮನಿರು ತ್ತವೆ. ನಿದ್ದೆಯಲ್ಲಿ ಉನ್ನತಿಗೆ ಅವಕಾಶವೆಲ್ಲಿ? ಅಂತೆಯೆ ಅದಕ್ಕೆ ನಿದ್ದೆಯೆಂಬ ಹೆಸರು. ಜಾಗೃತಾವಸ್ಥೆಯಲ್ಲಿ ಈ

ಇಂದ್ರಿಯಗಳೆಲ್ಲ ಜಾಗೃತವಿರುತ್ತವೆ. ಕಣ್ಣಿನಿಂದ ನೋಡಿ, ಕೇಳಿ, ಮನಸ್ಸಿನಿಂದ ಗ್ರಹಿಸಿ, ಬುದ್ಧಿಯಿಂದ ತೂಗಿ ನೋಡಿ ಬೆಲೆ ಕಟ್ಟಬೇಕು !....ಅದಂತಿರಲಿ, ನೀನು ಎಲ್ಲಿ, ಯಾತಕ್ಕಾಗಿ ಹೊರಟಿರುವೆ ? '' ಪುಷ್ಪವು ತನ್ನ ಕಥೆಯನ್ನು ಸಾದ್ಯಂತವಾಗಿ ಪವನನಿಗೆ ಹೇಳಿತು. ಪವನನು ವಿಷಾದಗೊಂಡು ಹೇಳಿದನು—''ನಿಸರ್ಗದೋಲಗದಲ್ಲಿಯ ಏಕನಿಷ್ಠ ಸೇವಕನು ನಾನು. ನಿಯಮ ಮೀರದಂತೆಯೇ ನಾನು ನಿನ್ನೊಡನೆಯೂ ನಡೆಯಬೇಕಾಗುವುದು. ಶೀಲ, ನೀತಿ, ಧರ್ಮ, ಕರ್ತವ್ಯ, ಸತ್ಯ ಪಾಲಿಸುವ ಸುಜನರಿಗೆ ಗೊತ್ತಾಗದಂತೆ ಇಲ್ಲಿಯ ಕಾನೂನುಗಳನ್ನು ಮುಚ್ಚಿಡಲಾಗುವುದಿಲ್ಲ.'' ಹೀಗೆನ್ನುತ್ತ ಪವನನು ಒಂದು ದೊಡ್ಡ ಪುಡಿಕೆಯನ್ನೇ ಪುಷ್ಪಕ್ಕೆ ತೋರಿಸಿದನು. ಪುಷ್ಪವು ಉತ್ಕಂಠೆಯಿಂದ ಕೇಳಿತು—''ಅದೆಲ್ಲಾ ಇರಲಿ. ನ್ಯಾಯಕ್ಕೆ ನ್ಯಾಯ, ಅನ್ಯಾಯಕ್ಕೆ ಅನ್ಯಾಯ ಎಂಬ ಕಾನೂನು ನಿಸರ್ಗದಲ್ಲಿಲ್ಲವೇ ? '' ಗಾಯ ಮಾಯ್ದರೂ ಕಲೆ ಹೋಗುವುದಿಲ್ಲ ! ಪುಷ್ಪದ ಮನಃಸ್ಥಿತಿಯೂ ಅದೇ ಬಗೆಯದಾಗಿದೆ ಎಂಬುದನ್ನು ಪವನನರಿತು ತಿಳಿಹೇಳುವ ದನಿಯಲ್ಲೆಂದನು-''ಮಿತ್ರಾ, ನ್ಯಾಯ-ಅನ್ಯಾಯ, ಸತ್ಯ-ಅಸತ್ಯ, ಬೆಳಕು-ಕತ್ತಲೆ ಇವುಗಳ ಕಲೆಬೆರಕೆಯಾಗಲು ಇದೇನು ಭೂಲೋಕದ ರಾಜ್ಯವಲ್ಲ ! ಇಲ್ಲಿ ನ್ಯಾಯದ ಹೊರತು ಬೇರೇನೂ ದೊರೆಯುವುದಿಲ್ಲ. ಸಾಗರದ ಹತ್ತಿರ ನೀರಲ್ಲದೆ ದೊರೆಯುವುದೇನು ? ಪ್ರೇಮದ ಹತ್ತಿರ ಪ್ರೇಮ, ಶೀಲದ ಹತ್ತಿರ ಶೀಲ, ನೀತಿಯ ಹತ್ತಿರ ನೀತಿ, ಧರ್ಮದ ಹತ್ತಿರ ಧರ್ಮ—ಇದು ಸ್ವಾಭಾವಿಕವೇ ಇದೆ....'' ಪವನನ ಮಾತು ಮುಗಿಯುವ ಮುಂಚೆಯೆ ಪುಷ್ಪವೆಂದಿತು—''ಮಾತೆಯು

ತನ್ನ ಸದ್ಗುಣಸಂಪನ್ನ — ದುರ್ಗುಣಸಂಪನ್ನ ಮಕ್ಕಳೆರಡರ ಮೇಲೂ ಪ್ರೇಮ ಮಾಡುತ್ತ, ಇಬ್ಬರಿಗೂ ಸವಿತಿನಿಸು ಕೊಡು ವಂತೆಯೇ ಅಲ್ಲವೇ ಇಲ್ಲಿಯ ನ್ಯಾಯ ? ”

ಪವನನಿಗೆ ಪುಷ್ಪದ ದಯೆಬಂದು ಕಳಕಳಿಯಿಂದ ಅವನೆಂದನು—“ಪ್ರಿಯ ಪುಷ್ಪವೇ! ದಾರಿದ್ರ್ಯದ ಮನೆಗೆ ದೈನ್ಯವೇ ನಡೆದುಬರವುದು, ಸುಖಸಮಾಧಾನಗಳೆದುರಿನಲ್ಲಿ ಶಾಂತಿಯ ಎಡೆ ಬಡಿಸಿಟ್ಟಿರುವುದು” ಪವನನು ಮುಂದರಿದು ಮತ್ತಿಂತೆಂದನು—“ಕೇಳು, ನ್ಯಾಯಿಗಳು ನಿರ್ಭಯರಾಗು ವರು. ಪರರಿಗೆ ಸುಖಕೊಡುವವರು ಹೆಚ್ಚು ಸುಖಿಗಳಾಗು ವರು. ದಾನ ಕೊಡುವವರು ಅಭಿವೃದ್ಧಿ ಹೊಂದುವರು. ನೀತಿವಂತರು ಸಾಮರ್ಥ್ಯಶಾಲಿಗಳಾಗುವರು....” ಪುಷ್ಪವು ನಡುವೆಯೇ ಬಾಯಿಹಾಕಿ ಕೇಳಿತು — “ನಿಮ್ಮ ರಾಜ್ಯದಲ್ಲಿ ಅನ್ಯಾಯಕ್ಕೆ ಬಹುಮಾನವೋ ಶಾಸನವೊ ? ”

ಪವನನೆಂದನು—“ಭೂಲೋಕದ ರಾಜ್ಯದಲ್ಲಿಯಂತೆ ಇಲ್ಲಿ ಪ್ರಕಟಶಾಸನವಿಲ್ಲ. ಪ್ರಕಟಶಾಸನಕ್ಕಿಂತಲೂ ಇಲ್ಲಿಯ ಶಾಸನವು ಕಠೋರವಾಗಿದೆ, ಕೇಳು ! ಯಾರು ಹೆರವರ ಹರಣ ಮಾಡುವರೋ ಅವರ ಸರ್ವಸ್ವವೂ ಹರಣವಾಗುವುದು. ಹೆರವರನ್ನು ನೋಯಿಸುವವರು ಘೋರ ದುಃಖಕ್ಕೀಡಾಗು ವರು. ಅನ್ಯಾಯ ಮಾಡುವವರು ಅವನತಿ ಹೊಂದುವರು. ಅನೀತಿಯಿಂದ ನಡೆಯುವವರು ಅಸಹಾಯರಾಗುವರು. ಸೂರ್ಯನು ಮೇಘಗಳಿಗೆ ಗುಪ್ತವಾಗಿಯೇ ಬಣ್ಣ ಕೊಡು ವಂತೆ ನಿಸರ್ಗಶಕ್ತಿಯು ಗುಪ್ತವಾಗಿಯೇ ತನ್ನ ಕಾನೂನು ಗಳನ್ನು ಜಾರಿಯಲ್ಲಿ ತರುವಳು....ಮಿತ್ರಾ, ಕುಂಕುಮ ತಿಲಕ ದಂತಿದೆ ನಿನ್ನ ಮಾಂಗಲ್ಯ. ಹಣೆಯಲ್ಲಿಯ ಕುಂಕುಮದ

ಬೊಟ್ಟಿನಂತೆಯೇ ನಿನ್ನ ಸ್ಥಾನವೂ ಅತ್ಯುನ್ನತವಾಗಿದೆ! ಪ್ರಭುವಿನ ಬಳಿ ಹೋಗಿ ಹಟಹಿಡಿದು ಕುಳ್ಳಿರು! ಬಯಕೆ ಈಡೇರುವವರೆಗೂ ಅಲ್ಲಿಂದ ಕದಲದಿರು!”

ಸೃಷ್ಟಿಯ ಶ್ರೇಷ್ಠ ಅಧಿಕಾರಿಯೋರ್ವನ ಕಕ್ಕುಲಾತಿಯ ಮಾತಿನಿಂದ ಪುಷ್ಪದ ವ್ಯಥೆ ಅದೆಷ್ಟೋ ಶಾಂತವಾಗಿದ್ದಿತು. ಆದರೂ ತಾಯಿ ಯಾವಾಗಲೋ ಒಮ್ಮೆ ಕೆನ್ನೆಗೇಟು ಕೊಟ್ಟಿದ್ದರೂ, ನೆನೆಸಿ ನೆನೆಸಿ ಕೂಸು ಬಿಕ್ಕುತ್ತಿರುವಂತೆ ಪುಷ್ಪವೂ ಮಾಡುತ್ತಿತ್ತು.

ನ್ಯಾಯದಾನ ಬೇಡಲು ಪುಷ್ಪವು ಪ್ರಭುವಿನ ಪ್ರಾಸಾದದ ವರೆಗೂ ಬಂದು ತಲುಪಿತು. ಭವ್ಯಮಂದಿರದ ದ್ವಾರದಲ್ಲಿ ದ್ವಾರಪಾಲಕರು ನಿಂತಿದ್ದರು. ಅವರ ಕಡೆಗೆ ದೃಷ್ಟಿಕ್ಷೇಪ ಮಾಡುತ್ತ ಪುಷ್ಪವು ನೇರವಾಗಿ ಒಳಹೊಕ್ಕಿತು. ಪುಷ್ಪವು ಒಳಗೆ ಪ್ರವೇಶಿಸಿದೊಡನೆಯೇ ಎಲ್ಲೆಲ್ಲಿಯೂ ಸೌಗಂಧ್ಯವು ಇಡುಗಿಬಿಟ್ಟಿತು.

ರತ್ನಖಚಿತ ಪರ್ಯಂಕದ ಮೇಲೆ ಪ್ರಭುಗಳು ಕಾಲಮೇಲೆ ಕಾಲುಚೆಲ್ಲಿ ಕಾಲುಚಾಚಿ ಕುಳಿತಿದ್ದರು. ಪರ್ಯಂಕದ ಕಾಲ್ದೆಸೆಗೆ ಜಗನ್ಮಾತೆಯು ಕುಳಿತಿದ್ದಳು. ತ್ರೈಲೋಕ್ಯ ಪ್ರಭುಗಳು ಭೂಲೋಕದ ಮನೋರಂಜಕ ಸಂಗತಿಗಳನ್ನು ದೇವಿಗೆ ಹೇಳುತ್ತಿದ್ದರು.

ಒಮ್ಮೆಲೆ ಪರಿಮಳವು ಎಲ್ಲೆಲ್ಲಿಯೂ ಪಸರಿಸಿತು. ಬಾಗಿಲೊಳಗಿಂದ ಅಡರಿಬರುತ್ತಿರುವ ಸುಗಂಧವನ್ನು ಆಘ್ರಾಣಿಸುತ್ತ ಜಗನ್ಮಾತೆಯೆಂದಳು— “ಭಗವನ್, ಈ ಸುಮಧುರ ವಾಸನೆಯು ಎಲ್ಲಿಯದು?” ತ್ರಿಲೋಕಪತಿಯೆಂದರು— “ಭೂತಲದಲ್ಲಿಯ ಪುಷ್ಪವೊಂದು ಸೂಕ್ಷ್ಮದೇಹ ಧರಿಸಿ ಇತ್ತ

ಬರುತ್ತಿದೆ.''

ದೇವಿ :—''ಇಲ್ಲಿಗೇ ನಮ್ಮ ಮಹಲಿನಲ್ಲಿಯೇ ? ''

ಪ್ರಭು :—''ಹೌದು ದೇವೀ ! ''

ದೇವಿ :— '' ಅಪ್ಪಣೆ ಪಡೆಯದೆಯೇ ಮಹಲಿನಲ್ಲಿ ಬರುತ್ತಿದೆಯೇ ? ''

ಪ್ರಭು :—''ದೇವೀ ! ನನ್ನೊಡನೆ ಮಾತನಾಡಲು ನಿಮಗೆ ಪೂರ್ವಾನುಮತಿ ಬೇಕೆ ! ''

ಸವಿನಯ ಸ್ಮಿತ ಮಾಡುತ್ತ ದೇವಿ ಸುಮ್ಮನಾದಳು.

ಪ್ರಭು :—'' ಅನುಮತಿ ಪಡೆಯಲೂ ಬಂಧನವಿದೆ. ಅನುಮತಿ ಪಡೆಯದಿರಲೂ ಬಂಧನವಿದೆ.

ದೇವಿ (ವಿನೋದದಿಂದ) :—''ಎರಡು ಭಿನ್ನ ಭಿನ್ನ ಸಂಗತಿಗಳಿಗೆ ಒಂದೇ ಬಂಧನವೆಂತು ? ''

ಪ್ರಭು :—''ಅನುಮತಿ ಪಡೆಯಲು ನಿಯಮದ ಬಂಧನ, ಅನುಮತಿ ಪಡೆಯದಿರಲು ಪ್ರೇಮದ ಬಂಧನ ! ನಿರ್ಮಲರಿಗೆ ನಮ್ಮ ಅನುಮತಿಯು ಅಗತ್ಯವೇ ಇಲ್ಲ ! ಅವರ ಅನುಮತಿಯೇ ನಮಗೆ ಬೇಕಾಗುತ್ತದೆ ! ನಾವು ಪ್ರೇಮದ ದಾಸರು. ಅವರೇ ನಮ್ಮ ಮೇಲೆ ಅಧಿಕಾರ ನಡೆಯಿಸುವರು.''

ದೇವಿ :— ''ಪ್ರಭೋ ! ಭೂತಲದಲ್ಲಿಯ ಪುಷ್ಪದ್ದೇ ಈ ಮಧುರ ಪರಿಮಲವು ? ''

ಪ್ರಭು (ನಕ್ಕು) :—''ಹೌದು ದೇವೀ ! ಪುಷ್ಪದ ನಿರ್ಮಲ ನಿಷ್ಕಲಂಕ ಜೀವನದ ಸೌಗಂಧ್ಯವು ಸೂರೆಯಾಗುತ್ತಿದೆ ! ಪ್ರಫುಲ್ಲತೆಯಿಂದ ಜೀವನ ಸಾಗಿಸಿ ಈ ಪುಷ್ಪವು ಹಲವರನ್ನು ಪ್ರಫುಲ್ಲಗೊಳಿಸಿದೆ. ವಿಷಣ್ಣರನ್ನು ನಗಿಸಿದೆ. ನಿರಾಶರನ್ನು ಉತ್ತೇಜಿತಗೊಳಿಸಿದೆ. ಕೇವಲ ಪರರಿಗಾಗಿಯೇ ಜೀವನವನ್ನು

ವ್ಯಯಿಸಿದ ಈ ಸಹೃದಯ ಪುಷ್ಪದ ಮಂಗಲ ಪರಿಮಳದಿಂದ ಈ ದೇವಲೋಕದ ವಾತಾವರಣವೆಲ್ಲ ಇಡುಗಿಹೋಗಿದೆ. ಇಂತಹ ಸುಕೋಮಲ, ಸುಂದರ, ಸುನಿರ್ಮಲ, ಸುಪ್ರಸನ್ನ, ಸದಾಪ್ರಫುಲ್ಲ ಜೀವನವು ಪುಷ್ಪಕ್ಕೇ ಮೀಸಲಾಗಿದೆ. ಪುಷ್ಪವು ಮಾಂಗಲ್ಯದ ಮಾಂಗಲ್ಯವಾಗಿದೆ! ನಿಃಸ್ವಾರ್ಥ ಜೀವನವೇ ಈ ಚೆಲುವನ್ನು ಪುಷ್ಪಕ್ಕೆ ತಂದುಕೊಟ್ಟಿತು. ಸಹೃದಯತೆಯಿಂದ ಸುಕೋಮಲತೆಯು ಬಂದಿತು. ತ್ಯಾಗದಿಂದ ಪ್ರಫುಲ್ಲತೆಯು ದೊರಕಿತು. ನಿರಲಸತೆಯಿಂದ ನಿತ್ಯನವೀನತೆಯುಂಟಾಯಿತು. ಸೌಂದರ್ಯದ ಸೌಂದರ್ಯವೆಂದರೇನೇ ಪುಷ್ಪ!"

ದೇವಿ (ನಡುವೆಯೇ) :— "ಇಂತಹ ಮಾಂಗಲ್ಯಮಯ ಪುಷ್ಪವನ್ನು ಭೂತಲದಲ್ಲಿಯೇ ಏಕೆ ಬಿಡಲಾಯಿತು?"

ಪ್ರಭು :—"ಮಾನವನ ಹೃದಯ ಪುಷ್ಪವೂ ಈ ಸುಮಂಗಲ ಪುಷ್ಪದಂತೆಯೇ ಇದೆ. ವಿಕಾರವಶತೆಯಿಂದ ಮಾನವನು ಸ್ವಾರ್ಥಾಂಧನಾದುದರಿಂದ ತನ್ನೊಳಗಿನ ಮಾಂಗಲ್ಯವು ಅವನಿಗೆ ಕಾಣುವುದಿಲ್ಲ. ಅದರ ವಿಸ್ಮೃತಿಯೇ ಅವನಿಗಾಗಿದೆ. ಆ ಸ್ಮೃತಿಯುಂಟಾಗಲು ಹಾಗೂ ಮಾನವ ಹೃದಯದ ವಿಕಾಸವಾಗಲು ಪುಷ್ಪವು ಅವರ ದೃಷ್ಟಿಯಲ್ಲಿ ಯಾವಾಗಲೂ ಇರಲೇಬೇಕು. ಪುಷ್ಪದ ಸಂಕೇತವನ್ನು ಮುಂದಿರಿಸಿಕೊಂಡು ಮನುಷ್ಯ ಹೃದಯವು ಪುಷ್ಪಸಮವಾಗತೊಡಗಿತೆಂದರೆ ಸ್ವರ್ಗೀಯ ಸೌಖ್ಯವು ಭೂತಲದಲ್ಲಿ ಅವತರಿಸುವುದು!"

ಪ್ರಭುಗಳು ಇಂತು ಮಾತನಾಡುತ್ತಿರುವಷ್ಟರಲ್ಲಿ ಪುಷ್ಪವು ಅಲ್ಲಿ ಬಂದು ತಲುಪಿತು. ಪುಷ್ಪವು ಧಾವಿಸಿ ಬಂದು ಪ್ರಭುಗಳ ಹಾಗೂ ಜಗನ್ಮಾತೆಯ ನಡುವೆ ಕುಳ್ಳಿರುವಷ್ಟರಲ್ಲಿ, ಪ್ರಭುಗಳು

ಆಕಡೆಗೆ ಕೌತುಕದಿಂದ ದೃಷ್ಟಿಕ್ಷೇಪ ಮಾಡುತ್ತ, ತೂರಿಬರುವ ಚೆಂಡನ್ನು ನಡುವೆಯೇ ಎತ್ತಿಹಿಡಿಯುವಂತೆ ಪುಷ್ಪವನ್ನು ಒಮ್ಮೆಲೇ ಕೈಯಲ್ಲಿ ತೆಗೆದುಕೊಂಡು ತಮ್ಮ ಹೃದಯಕ್ಕೆ ಒತ್ತಿಕೊಂಡರು, ಮಸ್ತಕದಲ್ಲಿ ಧರಿಸಿದರು. ತೊಡೆಯಲ್ಲಿ ಕುಳ್ಳಿರಿಸಿ ಯೋಗಕ್ಷೇಮವನ್ನು ವಿಚಾರಿಸಿದರು. ಎಳೆಮಗು ಮನಸ್ಸಿನಿಂದ ಏನಾದರೂ ರಚಿಸಿ ಹೇಳುವ ಮುಂಚೆ ನೆನಪು ಮಾಡಿಕೊಳ್ಳುವಂತೆ ಪುಷ್ಪವೂ ಏನನ್ನೋ ನೆನಪು ಮಾಡಿಕೊಳ್ಳಹತ್ತಿತು.

ಪ್ರಭುಗಳ ಪ್ರೇಮಪೂರ್ಣ ಕರಸ್ಪರ್ಶದಿಂದ ಪುಷ್ಪದ ಅಚ್ಚೆ ಮಿತಿಮೀರಿತು. ತಾಯಿ ಕೂಸಿನ ಅಚ್ಚೆ ಮಾಡತೊಡಗಿದರೆ ಅದು ತಾಯಿಯ ಮೇಲೆ ಮತ್ತಷ್ಟು ಹಕ್ಕು ನಡೆಯಿಸುವಂತೆ ಪುಷ್ಪವು ಪ್ರೇಮದ ಅಧಿಕಾರದಿಂದ, ನಿಷ್ಪಾಪತೆಯ ಹಕ್ಕಿನಿಂದ, ಸುಳ್ಳು ಮುನಿಸಿನಿಂದ, ಗಲ್ಲ ಉಬ್ಬಿಸಿಕೊಂಡು ತನ್ನ ಕತೆ ಹೇಳತೊಡಗಿತು. ವಸಂತರಾಜನಿಂದ ತನಗೆ ನವಜೀವನವು ಉಂಟಾಗದಿದ್ದುದನ್ನು ಬಿಕ್ಕಿ ಬಿಕ್ಕಿ ಹೇಳತೊಡಗಿತು. ಪ್ರಭುಗಳನ್ನು ನೋಡಿದೊಡನೆಯೇ ಪುಷ್ಪದ ಹುಸಿದುಃಖವೆಲ್ಲ ಉಕ್ಕಿ ಬಂದಿತು. ಒಡನಾಡಿಯು ಮೆಲ್ಲನೆಯೆ ಏಟುಕೊಟ್ಟರೂ ಕೂಸು ತಾಯಿಯ ಮುಂದೆ 'ಬಲವಾದ ಪೆಟ್ಟು ಬಿದ್ದಿತೆ'ಂದು ಉಬ್ಬಿಸಿ ಹೇಳುವಂತೆ, ಅಭಿನಯಿಸುವಂತೆ, ಪುಷ್ಪವಾದರೂ ಪ್ರಭುಗಳ ಮುಂದೆ ಬಿಕ್ಕಿಬಿಕ್ಕಿ ತನ್ನ ದುಃಖವನ್ನು ಬೆಳಸಿ ಹೇಳಿತು.

ಪ್ರಭುಗಳು ಎಲ್ಲ ಕೇಳಿಕೊಂಡು ಎಂದರು—"ಸುಮಂಗಲಾ! ನಿನ್ನ ಮೇಲೆ ಅನ್ಯಾಯವಾಗಿಲ್ಲ. ತರುಲತೆಗಳು ನವಪಲ್ಲವಯುತವಾಗುವಂತೆ ಮಾಡುವುದು, ಎಲ್ಲೆಲ್ಲಿಯೂ ಚಿಗುರ ನ

ಭರ ಬರುವಂತೆ ಮಾಡುವುದು ವಸಂತರಾಜನ ಕಾರ್ಯವಲ್ಲವೆ ಗತಪ್ರಾಣರಾದವರಿಗೆ ಪುನರ್ಜೀವನ ಕೊಡುವುದಲ್ಲ. ತಂತಮ್ಮ ಅಧಿಕಾರ ಮೀರದೆ ಕರ್ತವ್ಯನಿಷ್ಠೆಯಿಂದ ಕೆಲಸಮಾಡುತ್ತಿರುವುದು ನಿಸರ್ಗರಾಜ್ಯದಲ್ಲಿಯ ನೀತಿನಿಯಮವಾಗಿದೆ. ಸುಮಂಗಲನಾದ ನಿನ್ನನ್ನು ನೋಡಿ ಪರ್ಣಗಳು ಉಡಾಳತನದಿಂದ ನಕ್ಕವು. ಪರ್ಣಗಳು ಪರ್ಣಗಳೆ! ಸಜ್ಜನರನ್ನು ನೋಡಿ ದುರ್ಜನರಲ್ಲದೆ ಇನ್ನಾರು ನಗುವರು? ಪರ್ಣಗಳಿಗೆ ನಿನ್ನ ಹಿರಿಮೆಯೆಂತು ತಿಳಿಯುವುದು? ನಿನ್ನ ಮಾಂಗಲ್ಯದ ಕಲ್ಪನೆಯೆಂತು ಬರುವುದು? ನಿನ್ನ ತ್ಯಾಗದ ಅಲೌಕಿಕತೆ ಎಂತು ಗೊತ್ತಾಗುವುದು? ಅವುಗಳ ಸಂಕುಚಿತ ದೃಷ್ಟಿಯು ಮೂಲಕ ಅವು ಪರ್ಣದ ಆಕಾರದಲ್ಲಿಯೇ ಬದ್ಧವಾಗಿ ಬಿಡುವವು. ಅವಕ್ಕೆ ನಿನ್ನ ಸ್ಥಾನ ದೊರೆಯದು. ಪುಷ್ಪವು ಪುಷ್ಪವೇ! ಪರ್ಣವು ಪರ್ಣವೇ!"

ಪುಷ್ಪವೆಂದಿತು - "ಪ್ರಭೋ! ಇಲ್ಲಿ ಎಲ್ಲೆಡೆಗೂ ಆನಂದವೇ ಆನಂದ! ಜಗನ್ಮಾತೆಯಂತೆ ನಾನಾದರೂ ಯಾವಾಗಲೂ ನಿನ್ನ ಸನ್ನಿಧಿಯಲ್ಲಿಯೇ ಇರಲೆಳಸುವೆನು. ನಿನ್ನ ಚರಣದಲ್ಲಿಯೇ ನನ್ನ ವಾಸವಿರಲಿ. ನನ್ನನ್ನು ದೂರ ದೂಡಬೇಡ! ನನ್ನ ಕೊರಳಾಣೆ ನಿನಗೆ!" ತುಂಬಿದ ಹೃದಯದಿಂದ ಪ್ರಭುಗಳು ಪುಷ್ಪವನ್ನು ತಕ್ಕೈಸುತ್ತ ಇಂತೆಂದರು — "ವತ್ಸಾ, ಇದು ನೋಡು. ನನ್ನ ಸ್ಪರ್ಶದಿಂದ ನಿನಗೆ ಅಮರತ್ವವುಂಟಾಗಿದೆ. ಶ್ರೇಷ್ಠರಲ್ಲಿ ಅತಿ ಶ್ರೇಷ್ಠ ಸ್ಥಾನವನ್ನು ನಿನಗೆ ಕೊಟ್ಟಿರುವೆ. ನಿನ್ನನ್ನು ನಾನು ಮಸ್ತಕದಲ್ಲಿ ಧರಿಸುವೆನು, ವಕ್ಷಃಸ್ಥಲದಲ್ಲಿರಿಸುವೆನು, ಕಂಠದಲ್ಲಿ ಮಾಲೆಮಾಡಿ ಹಾಕಿಕೊಳ್ಳುವೆನು, ಅಡಿಯಲ್ಲಿ ಆಶ್ರಯ ಕೊಡುವೆನು. ಮಾನ

ವರು ನಿನ್ನನ್ನು ಪ್ರೀತಿಸುವರು. ಕವಿವರ್ಯರು ನಿನ್ನನ್ನು ಕುರಿತು ಗೀತ ಹೇಳುವರು. ಚಿತ್ರಕಾರರು ನಿನ್ನ ಚಿತ್ರ ಬರೆಯುವರು. ಸಭೆ-ಸಮ್ಮೇಲನಗಳಲ್ಲಿ ನಿನಗೆ ಗೌರವ ದೊರೆಯುವುದು. ಸುವಾಸಿನಿಯರು ಸೌಭಾಗ್ಯಾಲಂಕಾರವೆಂದು ನಿನ್ನನ್ನು ಸೂಡುವರು. ರಸಿಕರು ನಿನ್ನನ್ನು ಆದರದಿಂದ ಕಾಣುವರು. ಪೂಜಾಸಾಹಿತ್ಯದಲ್ಲಿ ನಿನಗೆ ಅಗ್ರಸ್ಥಾನ ದೊರೆಯುವುದು. ನೀನು ಮಾಂಗಲ್ಯದ ಪ್ರತೀಕವಾಗಿ ಮೆರೆಯುವೆ. ನಿನ್ನಂತೆಯೇ ನಿನ್ನ ಪರಂಪರೆಯೂ ಸೌಗಂಧ್ಯಯುಕ್ತವಾಗಿರುವುದು.—ಇದು ನಿನಗೆ ನನ್ನ ಆಶೀರ್ವಾದ!''

ಪ್ರಭುಗಳು ಮತ್ತಿಂತೆಂದರು — "ಭೂಲೋಕಕ್ಕೆ ನೀನು ಮರಳಬೇಕು. ನಿನ್ನ ಸಂಕೇತವು ಮಾನವರೆದುರು ಸದಾ ಕಾಲವಿರಬೇಕಾಗಿದೆ. ಮನುಷ್ಯ ಹೃದಯವು ನಿನ್ನಂತಾಗುವವರೆಗೆ ನೀನು ಭೂಲೋಕದಲ್ಲಿರು; ಆಮೇಲೆ ನಾನು ನಿನ್ನನ್ನು ನನ್ನ ಅಖಂಡ ಸಾನ್ನಿಧ್ಯದಲ್ಲಿ ಇರಿಸಿಕೊಳ್ಳುವೆನು.''

ಪ್ರಭುಗಳ ಮತ್ತು ಜಗನ್ಮಾತೆಯ ಅಡಿಗೆರಗಿ ಪುಷ್ಪವು ಭೂಲೋಕಕ್ಕೈತಂದಿತು.

ಸೂರ್ಯನ ಕಿರಣಗಳು ಭೂಲೋಕಕ್ಕೆ ಬರುತ್ತಿದ್ದವು; ಪುಷ್ಪವು ಅವುಗಳ ಜೊತೆಯಲ್ಲಿ ಬರತೊಡಗಿತು! ಕಿರಣಗಳೆಂದವು—"ಪುಷ್ಪವೇ! ನಿನ್ನ ಭಾಗ್ಯ ಅಸಮಾನ! ಅನ್ಯಾಯದ ಕಲ್ಪನೆ ಮಾಡಿಕೊಂಡು ನೀನು ಅತಿ ಶ್ರೇಷ್ಠವಾದುದನ್ನು ಪಡೆದುಕೊಂಡು ಬಂದೆ! ಭಗವಂತನ ದರ್ಶನವಾಯಿತು ನಿನಗೆ! ಭೂಲೋಕದಲ್ಲಿಯೂ ನ್ಯಾಯವಿದೆ! ಸತ್ಯದ ನ್ಯಾಯವು ಎಷ್ಟು ಚೊಕ್ಕವಾಗಿದೆ—ಕಂಡೆಯಾ!''

ಎಷ್ಟೋ ವಿಲಾಸೀ ಜನರು ತಮ್ಮ ಕೋಟಿಗೆ ಹೂ ಚುಚ್ಚಿ

ದ್ದರು. ದೊಡ್ಡ ದೊಡ್ಡ ಕಚೇರಿಗಳಲ್ಲಿ ಮೇಜುಗಳ ಮೇಲೆ ಪಾತ್ರೆಗಳಲ್ಲಿ ಹೂಗೊಂಚಲುಗಳನ್ನು ಇರಿಸಲಾಗಿತ್ತು. ಸಭೆ-ಸಮ್ಮೇಲನಗಳಲ್ಲಿ ವ್ಯಾಖ್ಯಾತರ ಸತ್ಕಾರವನ್ನು ಪುಷ್ಪಮಾಲೆಗಳಿಂದಲೇ ಮಾಡಲಾಗುತ್ತಿತ್ತು. ಮದುವೆಯ ಮಂಗಲ ಪ್ರಸಂಗದಲ್ಲಿ ವಧೂವರರು ಪರಸ್ಪರರಿಗೆ ಪೂಮಾಲೆಗಳನ್ನು ಹಾಕುತ್ತಲೇ ಮಾಂಗಲ್ಯವನ್ನು ಸೂಚಿಸುತ್ತಿದ್ದರು. ಸುವಾಸಿನಿಯರು ಬಗೆಬಗೆಯಾಗಿ ಹೆರಳಲ್ಲಿ ಹೂ ಮುಡಿದುಕೊಳ್ಳುತ್ತಿದ್ದರು. ರಸಿಕರು ತಮ್ಮ ನಿವಾಸ ಸ್ಥಾನಗಳನ್ನು ಪುಷ್ಪಗಳಿಂದ ಅಲಂಕರಿಸುತ್ತಿದ್ದರು. ಹೂಗಾರರು ಹೂಗಳ ಅಂಗಡಿಗಳನ್ನೇ ತೆರೆದಿದ್ದರು. ಗಿರಾಕಿಗಳು ಬೆಲೆ ಕೊಟ್ಟು ಹೂಗಳನ್ನೂ ಮಾಲೆಗಳನ್ನೂ ಕೊಳ್ಳುತ್ತಿದ್ದರು. ಇದೆಲ್ಲ ನೋಡುತ್ತ ಕಿರಣಗಳೆಂದವು—"ಸುಮಂಗಲ ಸುಮವೇ! ಧನ್ಯ ನಿನ್ನ ಜೀವನ! ನಿನ್ನ ಮಹಿಮೆ ಅಗಾಧವಾದುದು! ಭಗವಂತನ ಮಸ್ತಕವೇರಿದ ನಿನಗೆ ನಮ್ಮ ಪ್ರಣಿಪಾತಗಳು!"

# ಮಿಲನ

ಒಂದು ಪಾವನತೀರ್ಥದ ಸಮೀಪದಲ್ಲಿಯ ಪ್ರಶಾಂತ ಪರಿಸರವು. ಅಲ್ಲಿಯೊಂದು ರಮಣೀಯ ಕುಟೀರವು. ಅಲ್ಲಿ ಒಬ್ಬ ಮುಗ್ಧ ಬಾಲಿಕೆಯು ತನ್ನ ಬಾಲಲೀಲೆಯನ್ನು ತೋರುತ್ತ ಆಟವಾಡುತ್ತಿದ್ದಳು. ಗಿಳಿ, ಮೈನಾ, ಭಾರದ್ವಾಜ ಪಕ್ಷಿಗಳು ಆಟದಲ್ಲಿ ಅವಳ ಜೊತೆಗಾರರಾಗಿದ್ದರು. ಅವಳ ಗುಡಿಸಲಿನ ಅಂಗಳದ ಗಿಡದ ಮೇಲೆ ಆವಳ ಈ ಮಿತ್ರರು ಇರುತ್ತಿದ್ದರು. ಒಮ್ಮೊಮ್ಮೆ ಮಯೂರವೂ ಈ ಬಾಲಿಕೆಯ ಬೆಟ್ಟಿಗೆ ಬರುತ್ತಿತ್ತು. ಚತುರ ಮಯೂರವು ತುಂಬಾ ಸೌಜನ್ಯದಿಂದ ಅವಳೊಡನೆ ವರ್ತಿಸುತ್ತಿತ್ತು. ಬಾಲಿಕೆಯನ್ನು ನೋಡಿದೊಡನೆ ಒಂದು ಕಾಲನ್ನು ಮೇಲಕ್ಕೆತ್ತಿ, ಗೋಣು ಒಮ್ಮೆ ಗ್ಗಲು ಬಾಗಿಸಿ, ಕೌತುಕಪೂರ್ಣವಾದ ಓರಿಗಣ್ಣಿನಿಂದ ಅವಳನ್ನು ನೋಡುತ್ತ ತನ್ನ ಆದರವನ್ನು ವ್ಯಕ್ತಗೊಳಿಸುತ್ತಿದ್ದಿತು.

ಹಕ್ಕಿಮರಿಗಳು ಯಾರ ಕಲಿಸುವಿಕೆಯಿಲ್ಲದೆಯೇ ಕೂಜಿಸತೊಡಗುವಂತೆ, ಈ ಬಾಲಿಕೆಯೂ ಸ್ವಯಂಸ್ಫೂರ್ತಿಯಿಂದ ಮಧುರವಾಗಿ ಮಾತನಾಡತೊಡಗಿದಳು. ನವಿಲಿನಂತೆ ಒಯ್ಯಾರ ಮಾಡುತ್ತ, ಬಳ್ಳಿಯಂತೆ ಬಳುಕುತ್ತ, ಹೂವಿನಂತೆ ತೂಗಾಡುತ್ತ, ಐರಾವತದಂತೆ ತೊನೆಯುತ್ತ, ನಾಗರಹಾವಿನಂತೆ ಒಲೆಯುತ್ತ ಆಟವಾಡತೊಡಗಿದಳು. ವೀಣೆಯು ಮಧುರ ನಾದವನ್ನು ಹೊರಹೊಮ್ಮಿಸುವಂತೆ ಬಾಲಿಕೆಯೂ ನಿಸರ್ಗದೇವಿಯ ಸಾನ್ನಿಧ್ಯದಲ್ಲಿ ಸುಸ್ವರದಿಂದ ಹಾಡತೊಡಗಿದಳು.

ಮೊಗ್ಗು ಅರಳಿದೊಡನೆ ತನ್ನ ಬಣ್ಣಬಣ್ಣಗಳಿಂದ ತಾನೇ ಮುಗ್ಧವಾಗಿ ಹೋಗುವಂತೆ, ಬಾಲಿಕೆಯು ಯುವತಿಯಾದೊಡನೆ ವಿಕಸಿಸುವ ತನ್ನ ಅಂತರಂಗದ ರಂಗುರಂಗಿನಲ್ಲಿ ಓಲಾಡತೊಡಗಿದಳು. ಫಲವತ್ತಾದ ಭೂಮಿಯಲ್ಲಿ ಅಂಕುರ ಹುಟ್ಟುವಂತೆ ಯುವತಿಯ ಹೃದಯದಲ್ಲಿ ಪ್ರೇಮದ ಮೊಳಕೆ ಹುಟ್ಟಿತು. ಭಕ್ತನು ಭಗವಂತನ ಗುಣಗೀತವನ್ನು ತನ್ನ ಭಾವನೆಗಳಿಂದ ಹೆಣೆಯುವಂತೆ ಯುವತಿಯು ಸುಮಧುರ ಸುಸ್ವರ ಶಬ್ದಗಳಿಂದ ಪ್ರೀತಿಗುಂಫನವನ್ನು ಮಾಡತೊಡಗಿದಳು. ಪ್ರೇಮದ ತಂತುಗಳಿಂದ ಕಟ್ಟಿದ ಪ್ರೇಮಸುಮಗಳ ಮಾಲೆಯನ್ನು ಕೈಯಲ್ಲಿ ಕೊಂಡು, ಯುವತಿಯು ಅಂತರಂಗದಲ್ಲಿ ಸ್ಫುರಿಸಿದ ಪ್ರೇಮಸ್ಪಂದನದ ತಾಳದಲ್ಲಿ ಪ್ರೇಮಪರವಶಳಾಗಿ ನೃತ್ಯವನ್ನೆಸಗುವಳು. ಇರುವೆಗಳಿಗೆ ಸಕ್ಕರೆಯು ಸುದ್ದಿಯಾರೂ ತಿಳಿಸದೆ ಹತ್ತುವಂತೆ, ಭೃಂಗಗಳಿಗೆ ಸುಮಗಳಲ್ಲಡಗಿದ ಮಕರಂದವು ತಾನಾಗಿ ವಿದಿತವಾಗುವಂತೆ, ಜ್ಞಾನಿಗೆ ಈಶ್ವರನ ಇರವು ಅಂತಃಸ್ಫೂರ್ತಿಯಿಂದ ಗೊತ್ತಾಗುವಂತೆ ಯುವತಿಗೆ ತನ್ನ ಪ್ರೇಮಸ್ಥಾನವು ಗೋಚರವಾಗತೊಡಗಿತು.

ಆ ಪ್ರಶಾಂತ ಪರಿಸರದಲ್ಲಿ ತುಂಬಿದ ಮುರಲೀರವವು ಯುವತಿಯ ಒಳಗಿವಿಗೆ ಕೇಳಬರತೊಡಗಿತು. ಶ್ರೀಕೃಷ್ಣನ ಕೈಯೊಳಗಿನ ಕೊಳಲು ಅವಳಿಗೆ ಕಾಣಿಸತೊಡಗಿತು. ಅಖಿಲ ಚರಾಚರಕ್ಕೆ ಪ್ರೇಮದ ಹುಚ್ಚು ಹಿಡಿಸಿದ ಮುರಲಿಯ ಪ್ರೇಮಗೀತವು ಯುವತಿಯ ಕಿವಿಯಲ್ಲಿ ಪ್ರೇಮಮಂತ್ರವನ್ನೂದತೊಡಗಿತು. ಮುರಲಿಯ ಪಂಚಪ್ರಾಣ ಸ್ವರೂಪನಾದ ಭಗವಾನ್ ಶ್ರೀಕೃಷ್ಣನು ಯುವತಿಯ ಮನಶ್ಚಕ್ಷುಗಳ ಮುಂದೆ ಅವತರಿಸಿದನು. ಪ್ರೀತಿಸಂಗಮದಲ್ಲಿ ನದಿಗಳು ಒಂದುಗೊಂಡು

ಎದುರಾಗಿ ಹರಿದು ಗಾಢಾಲಿಂಗನವನ್ನು ಅನುಭವಿಸುವಂತೆ ಭಗವಾನ್ ಶ್ರೀಕೃಷ್ಣನ ವಿಶಾಲರೂಪವೂ ಯುವತಿಯ ಪ್ರೇಮಮಯ ಹೃದಯವೂ ಒಂದನ್ನೊಂದು ಬಿಗಿಯಾಗಿ ಅಪ್ಪಿಕೊಂಡು ಬೆರೆತವು.

ಪಕ್ವಫಲವು ತನ್ನ ಮಧುರರಸದಿಂದ ಅವನ್ನು ಆಸ್ವಾದಿಸುವ ರಸನೆಯನ್ನು ಮಧುರಗೊಳಿಸುವಂತೆ ಯುವತಿಯು ತನ್ನ ಗಾನಾನಂದದಿಂದ ಆಸಮಂತಾತ್ – ಪ್ರದೇಶವು ಮಾಧುರ್ಯಮಯವಾಗುವಂತೆ ಮಾಡುತ್ತಿದ್ದಳು. ಬಿಸಿಲಿನಿಂದ ಬಸವಳಿದ ಭೂಮಿಯನ್ನು ಪರ್ಜನ್ಯವು ತಣಿಸುವಂತೆ, ಯುವತಿಯು ತಾನು ತಲ್ಲೀನಳಾಗಿ ಎಸಗುವ ನೃತ್ಯದ ಝಣತ್ಕಾರದಿಂದ ಭೂಮಿಯಲ್ಲಿ ವಿಶ್ರಾಂತಿಯ ಸಿಂಚನವನ್ನು ಮಾಡುತ್ತಿದ್ದಳು. ಅವಳ ಗಾನನೃತ್ಯಗಳ ನಿನಾದದಿಂದ ಸಕಲ ಪರಿಸರವು ತಾದಾತ್ಮ್ಯ ಹೊಂದಿ ಭಾವಪರಿಪೂರ್ಣವಾಯಿತು. ಅಖಿಲಸೃಷ್ಟಿಯು ಆತ್ಮಾನಂದದಿಂದ ತಲೆದೂಗಹತ್ತಿತು. ರವಿಶಶಿಗಳು ಗಾನಾನಂದದಿಂದ ಲಯಬದ್ಧಗತಿಯಲ್ಲಿ ತಿರುಗತೊಡಗಿದರು. ತೃಪ್ತಿಯು ದೇಹ–ಮನಗಳನ್ನು ಹೊಕ್ಕು ಅಣು–ಅಣುಗಳನ್ನೂ ಸಂತೋಷಗೊಳಿಸುವಂತೆ. ಯುವತಿಯ ಗಾನರವವು ಸುತ್ತಲಿನ ಜೀವಜಾತಗಳಿಗೆ, ತರುಲತೆಗಳಿಗೆ, ಕಲ್ಲುಬಂಡೆಗಳಿಗೆ ಕೂಡ ತೀರಲಾರದ ಶಾಂತಿಯನ್ನೀಯತೊಡಗಿತು.

ನೆರೆಯ ನಗರದ ತರುಣ ರಾಜನೊಬ್ಬನು ಓಲಗದ ಕೆಲಸ ಮುಗಿದೊಡನೆ ವಿಶ್ರಾಂತಿ ಪಡೆಯಲೋಸುಗ ಉದ್ಯಾನದ ಕಡೆಗೆ ಹೋಗಲು ಉತ್ಸುಕನಾದನು. ತನ್ನ ತಲೆಯ ಮೇಲಿನ ಮುಕುಟವನ್ನು ಆತನು ತೆಗೆದಿಟ್ಟನು. ರಾಜವೈಭವವನ್ನು ಪ್ರದರ್ಶಿಸುವ ಮೈಮೇಲಿನ ಬೆಲೆಯುಳ್ಳ ರತ್ನಖಚಿತ ಹಾರ

ಗಳನ್ನು ತೆಗೆದಿರಿಸಿದನು. ತನ್ನ ಜರಿಯ ಉಡುಪುತೊಡುಪು ಗಳನ್ನು ಕಳಿದಿಟ್ಟು, ಮಡಿಬಟ್ಟೆಯನ್ನುಟ್ಟುಕೊಂಡು, ಉದ್ಯಾನದಲ್ಲಿಯ ಲತಾಕುಂಜದತ್ತ ಹೊರಳಿದನು. ರಾಜನು ಒಂದು ಹೂಬಳ್ಳಿಯ ತಣ್ಣೆಳಲಿನಲ್ಲಿ ವಿಶ್ರಾಂತಿಗಾಗಿ ಪವಡಿಸಿದನು; ಹೂಬಳ್ಳಿಯ ಸುಮಧುರ ಸುಗಂಧದಿಂದ ಆತನ ದಣಿವೆಲ್ಲ ಎತ್ತಲೋ ಮಾಯವಾಯಿತು. ನೆಲದ ಮೇಲಿನ ಕಾಗದದ ತುಣುಕನ್ನು ಗಾಳಿಯು ಹಾರಿಸುತ್ತ ದೂರದೂರ ಒಯ್ಯುವಂತೆ ಹೂಬಳ್ಳಿಗಳ ಮಧುರ ಪರಿಮಳದ ಲಹರಿಗಳು, ರಾಜನ ಮನಸ್ಸಿನಲ್ಲಿ ಸಂತೆಹೂಡಿದ ನೂರಾರು ಯೋಜನೆಗಳನ್ನು —ರಾಜ್ಯ, ರಾಜ್ಯಭಾರ, ರಾಜಪ್ರಾಸಾದ, ರಾಜಾಸ್ಥಾನ, ರಾಜ, ಪ್ರಜೆ ಮೊದಲಾದ ವಿಚಾರಗಳನ್ನು — ದೂರದೂರ ಒಯ್ದು ಗಡಿಪಾರು ಮಾಡಿಬಿಟ್ಟವು. ಈ ವಿಚಾರಗಳ ಸಂದಣಿಯು ರಾಜನ ಮನಸ್ಸಿನಿಂದ ದೂರದೂರ ಹೋದಂತೆ ರಾಜನಿಗೆ ಸುಖಪೂರ್ಣ ವಿಶ್ರಾಂತಿಯು ಲಭಿಸತೊಡಗಿತು. ನೀರ ಮೇಲಿನ ಗುಳ್ಳೆಗಳು ನಿಂತೊಡನೆ ನೀರು ಸ್ಥಿರವಾಗುವಂತೆ ರಾಜನ ಮನಸ್ಸು ನಿಃಸ್ಪಂದವೂ ಶಾಂತವೂ ಆಗತೊಡಗಿತು.

ಇಂತು ಮನದಣಿ ವಿಶ್ರಾಂತಿಸುಖವನ್ನು ಅನುಭವಿಸುತ್ತ, ಪುಷ್ಪಲತೆಯ ಶೀತಲಛಾಯೆಯಲ್ಲಿ ರಾಜನು ವಿಶ್ರಮಿಸುತ್ತಿರುವಾಗ, ನೂಪುರಗಳ ಅಸ್ಪಷ್ಟ ಮಧುರ ರವವು ಆತನಿಗೆ ಕೇಳ ಬರತೊಡಗಿತು. ಆತನು ಲಕ್ಷ್ಯಪೂರ್ವಕವಾಗಿ ಆಲಿಸತೊಡಗಿದನು. ಲತಾಕುಂಜದಲ್ಲಿ ಸುತ್ತಲೂ ದೃಷ್ಟಿ ಬೀರಿದನು; ಆದರೆ ಯಾರೂ ಕಾಣಿಸಲಿಲ್ಲ. ಭೃಂಗವು ಕಣ್ಣಿಗೆ ಮರೆಯಾಗಿದ್ದರೂ ಗುಂಜಾರವವು ಕೇಳಿಸುತ್ತಲೇ ಇರುವಂತೆ ರಾಜನಿಗೆ ಝುಮ್

ಝುಮ್ ನಾದವು ಕೇಳಬರುತ್ತಿತ್ತು. ಈ ನಾದದಿಂದ ರಾಜನಲ್ಲಿಯ ಜಿಜ್ಞಾಸೆಯು ಜಾಗೃತವಾಯಿತು. ರಾಜನು ಚಟ್ಟನೆದ್ದು ಧ್ವನಿಯ ಜಾಡುಹಿಡಿದು ಹೊರಟನು. ಆ ನಾದ ಬಯ್ದತ್ತ ಹೋಗಿ ಯುವತಿಯ ವಾಸಸ್ಥಾನದ ಪರಿಸರವನ್ನು ತಲುಪಿದನು. ರಾಜನು ಒಂದು ಮರದ ನೆರಳಲ್ಲಿ ಕುಳ್ಳಿರಬೇಕೆನ್ನುವಷ್ಟರಲ್ಲಿ ಯುವತಿಯ ಗಾನರವವು ಗಾಳಿಗುಂಟ ಬಂದು ಅವನ ಕಿವಿಯನ್ನು ಹೊಕ್ಕಿತು. ಆ ಸ್ಪರ್ಶದಿಂದ ಅವನ ತನು ಪುಲಕಿತವಾಯಿತು. ಅಮೃತದ ಒಂದೇ ಗುಟುಕನ್ನು ಗುಟು-ಕರಿಸಿದರೂ ಸರ್ವಾಂಗವು ಶಾಂತಿಯಿಂದ ತೀವುವಂತೆ ಗಾನದ ಒಂದೇ ಅಲೆಯು ಅವನನ್ನು ಸಂತೋಷಪೂರಿತನನ್ನಾಗಿ ಮಾಡಿತು.

ಸುಖವನ್ನು ಸೇವಿಸುತ್ತಲೇ ಇರಬೇಕೆಂದು ಸಹಜವಾಗಿ ಅನಿಸುವಂತೆ ರಾಜನಿಗೆ ಆ ಗಾನಸುಧೆಯ ಪಾನ ಮಾಡುತ್ತಲೇ ಇರಬೇಕೆಂದೆನಿಸಿತು. ಅವನ ಗಮನವೆಲ್ಲ ಆಗ ತನ್ನ ಶ್ರವಣೇಂದ್ರಿಯದಲ್ಲಿಯೇ ಕೇಂದ್ರೀಕೃತವಾಗಿತ್ತು. ಕೂಸಿಗೆ ಮೊಲೆ ಕೊಡುವ ತಾಯಿ, ಏನಾದರೂ ಸಪ್ಪಳವಾಗಿ ಕೂಸಿನ ಹಾಲು ಕುಡಿಯುವುದಕ್ಕೆ ತಡೆಯಾಗಬಾರದೆಂದು ದಕ್ಷತೆ ವಹಿಸುವಂತೆ, ರಾಜನಿಗೆ ತಣ್ಣೆಳಲನ್ನಿತ್ತ ತರುವು ತನ್ನ ಟೊಂಗೆಗಳನ್ನೂ ಅಲುಗಾಡಿಸದೆ ಆತನ ತಾದಾತ್ಮ್ಯಭಂಗವಾಗದಂತೆ ಸ್ಥೈರ್ಯ ತಾಳಿತ್ತು. ಗಾನರವವು ನಿಂತೊಡನೆ ರಾಜನು ತನ್ನ ತಂದ್ರಿಯಿಂದ ಎಚ್ಚರಗೊಂಡನು.

ಒಂದೊಂದು ಹೊಸದಿನವು ರಾಜನಿಗೆ ಅಲ್ಲಿಯ ಪಾವಿತ್ರ್ಯದ ಅನುಭವವನ್ನು ಹೆಚ್ಚು ಹೆಚ್ಚಾಗಿ ತರತೊಡಗಿತು. ಅದೇ ಪರಿಸರವು ರಾಜನಿಗೆ ನಿತ್ಯನೂತನ-ಪ್ರಸನ್ನ-ಮಾಂಗಲ್ಯ

ಮಯವಾಗಿ ಪರಿಣಮಿಸಿತು. ಯುವತಿಯ ಗಾನರವದಿಂದ ಪುತ್ತಲಿನ ಪಾಷಾಣಗಳು ಕೂಡ ಕರಗಿ ಮೃದುವಾಗಿದ್ದವು. ರಾಜನು ಅಲ್ಲಿಗೆ ಪ್ರತಿದಿನ ಹೋಗತೊಡಗಿದನು; ಆಗ ಸಾದಾ ಶುಭ್ರವಸ್ತ್ರಗಳನ್ನು ತೊಟ್ಟುಕೊಳ್ಳುತ್ತಿದ್ದನು. ತನ್ನ ರಾಜ ಠೀವಿಯು ಅಲ್ಲಿಯ ಸಾತ್ವಿಕತೆಗೆ ಶೋಭಿಸಲಾರದೆಂದು ಅವನಿ ಗನಿಸುತ್ತಿತ್ತು. ಅಲ್ಲಿಯ ಪವಿತ್ರ ಸರಲ ಜೀವನವು ತನ್ನ ಸಿಂಗಾರ-ಸಿರಿವಂತಿಕೆಗಳಿಂದ ಕಲಕಿದಂತಾಗಬಾರದೆಂದು ಅವನು ಬಯಸಿದನು. ಅಲ್ಲದೆ ಎಲ್ಲಿ ಹರಳುಗಳು ಕೂಡ ಕಾಲಿಗೆ ನಡುವುದಿಲ್ಲವೋ, ಎಲ್ಲಿ ಮಣ್ಣು ಕೂಡ ರೇಶಿಮೆ ಗಿಂತಲೂ ಮಿದುವಾಗಿದೆಯೋ ಅಂತಹ ಸ್ಥಳದಲ್ಲಿ ಪಾದ ತ್ರಾಣಗಳ ಆವಶ್ಯಕತೆಯಾದರೂ ಏನು ಎಂದು ಯೋಚಿಸಿ, ಅವುಗಳನ್ನೂ ಬಿಟ್ಟುಕೊಟ್ಟನು. ಕಲ್ಲುಗಳ ಮೇಲಿನ ಪಾವಿ ತ್ರ್ಯದ ತುಷಾರಗಳು ಹಾರಿ—ಆರಿಹೋಗಬಾರದೆಂದು ಬಾಯಿಯಿಂದ ತುಸು ಕೂಡ ಊದದೆ, ಅತಿ ಸಾವಧಾನತೆ ಯಿಂದ ಮೈ ಕೈ ಅಲ್ಲಾಡಿಸದೆ ರಾಜನು ಕುಳ್ಳಿರುತ್ತಿದ್ದನು.

ಆ ಗಾನರವದಿಂದ ರಾಜನ ಕಿವಿಗಳು ತೃಪ್ತಿಗೊಂಡವು, ಆದರೆ ಕಣ್ಣುಗಳು ಮಾತ್ರ ಹಸಿದಿದ್ದವು. ಕಿವಿಗಳ ತೃಪ್ತಿ, ಕಣ್ಣುಗಳ ಅತೃಪ್ತಿ— ಈ ಸಂದುಕಟ್ಟಿನಲ್ಲಿ ರಾಜನು ಸಿಲುಕಿ ದನು. ಲೋಹವು ಲೋಹಚುಂಬಕದತ್ತ ತಾನಾಗಿಯೇ ಸರಿ ಯುವಂತೆ ರಾಜನು ಮುಂದೆ ಮುಂದೆ ಅಡಿಯಿಟ್ಟನು. ಆದರೆ ರಾಜನ ಮನಸ್ಸಿನಲ್ಲಿ ಒಮ್ಮೆಲೆ ಸೌಜನ್ಯದ ಕಿರಣವೊಂದು ಮೂಡಿ, ತನ್ನ ಮುಂದುರಿಯುವಿಕೆಯಿಂದ ಗಾನಭಂಗವಾದೀ ತೆಂದು ಅನಿಸಿ ಕೊಂಚ ತಡೆದನು. ಯಾವಳೊಬ್ಬ ಯುವ ತಿಯು ಗಾನಾನಂದದಲ್ಲಿ ತಲ್ಲೀನಳಾಗಿದ್ದರೆ ಆಗಂತುಕನಾಗಿ

ತಾನಲ್ಲಿ ಹೋಗುವುದು ಸಜ್ಜನಿಕೆಗೆ ಶೋಭಿಸದ ಸಂಗತಿಯೆಂದು ಅವನಿಗನಿಸಿತು.

ರತ್ನವನ್ನು ಸುವರ್ಣದ ಕುಂದಣದಲ್ಲಿ ಬಂಧಿಸಿಟ್ಟಂತೆ ರಾಜನು ವಿಚಾರಗಳ ಚೌಕಟ್ಟಿನಲ್ಲಿ ತನ್ನ ವ್ಯಕ್ತಿತ್ವವನ್ನು ಇದುವರೆಗೂ ಹಿಡಿದಿಟ್ಟಿದ್ದನು. ಏನೇ ಆದರೂ ತಾನು ನಿದ್ದೆ ಹೋಗಬಾರದೆಂದು ನಿಗ್ರಹದಿಂದ ಎಚ್ಚರಿಕೆಯಿರಲು ಪ್ರಯತ್ನಿಸುವವನಿಗೆ ಗೊತ್ತಾಗದೆಯೆ ನಿದ್ದೆ ಹತ್ತುವಂತೆ ರಾಜನ ಸ್ಥಿತಿಯಾಯಿತು. ಅಟಿಗೆಯ ವಸ್ತುವನ್ನು ಕೂಸು ಕೈಯಲ್ಲಿ ಗಟ್ಟಿಯಾಗಿ ಹಿಡಿದುಕೊಂಡು ನಿದ್ದೆ ಮಾಡುವಾಗ ಅದರ ಮುಷ್ಟಿ ಸಡಿಲಾಗಿ ಆ ವಸ್ತು ತಂತಾನೇ ಕಳಚಿ ಬೀಳುವಂತೆ, ರಾಜನ ಲಕ್ಷ್ಯವು ಗಾನಧ್ವನಿಯಿಂದ ದೂರ ಕೊಂಡೊಯ್ಯಲ್ಪಟ್ಟು, ಅವನ ವಿಚಾರಗಳು ಸ್ಥಳಬಿಟ್ಟು ಕದಲಿದವು. ಅವನ ಹೃದಯವನ್ನು ಆ ಗಾನದೇವಿಯು ಬಂಧಿಸಿದಳು. ರಾಜನು ಸೋತು ಸೆರೆಯಾಳಾದನು. ಯುವತಿಯಿರುವ ಸ್ಥಳದಿಂದ ರಾಜನು ತನ್ನ ಪ್ರಾಸಾದದಲ್ಲಿ ದೂರ ದೂರ ಇದ್ದರೂ, ಆ ಗಾನದ ತಾನಗಳು ಅವನ ಶ್ರುತಿಪಟಲಗಳ ಮೇಲೆ ಅಪ್ಪಳಿಸುತ್ತಿದ್ದವು. ತನ್ನ ಅರಮನೆಯ ಮುಂದಿನ ಭವ್ಯ ಉದ್ಯಾನದಲ್ಲಿ ವಿಹರಿಸುವಾಗಲೂ ಅವನ ಮನಶ್ಚಕ್ಷುಗಳ ಮುಂದೆ ಯುವತಿಯಿರುವ ವನದಲ್ಲಿಯ ಕಾಡುಬಳ್ಳಿಗಳು—ಹಾಡುಹೂಗಳು ಸುಳಿಯುತ್ತಿದ್ದವು. ತನ್ನ ಹೃದಯವು ತನ್ನ ದೇಹದಲ್ಲಿಯೇ ಇರುವುದೋ ದೇಹಬಿಟ್ಟು ಅಲೆದಾಡುವುದೋ ಎಂಬ ಶಂಕೆ ಅವನಿಗೆ ಬರತೊಡಗಿತು. ಅವನು ತನ್ನ ಅರಮನೆಯ ಮಂಚಕದ ಮೇಲೆ ಮಲಗಿರುವಾಗ ಯುವತಿಯು ವಾಸಸ್ಥಳದಲ್ಲಿಯ ಕಲ್ಲುಬಂಡೆಯ ಮೇಲೆ ಕುಳಿತಂತೆ ಕನಸುಬೀಳು

ತ್ತಿತ್ತು. ರಾಜನಿಗೆ ತನ್ನ ಪ್ರಾಸಾದವು ಕಾಣುತ್ತಿತ್ತು; ಆದರೆ ಆ ಪ್ರಾಸಾದದಲ್ಲಿ ಯುವತಿಯ ಪರಿಸರದಲ್ಲಿಯ ಬಯಲು ಕಣ್ಣಿಗೆ ಕಟ್ಟುತ್ತಿತ್ತು. ರಾಜನಿಗೆ ನಿದ್ದೆ ಬರುತ್ತಿದ್ದರೂ, ನಿದ್ದೆ ಹತ್ತದಿದ್ದಾಗ ಉಂಟಾಗುವ ರುಕ್ಷತೆಯು ಅವನನ್ನಾವರಿಸ ತೊಡಗಿತ್ತು. ಕಿರಿಬೆರಳಿಗೆ ನೋವಾದರೂ ಸರ್ವಾಂಗವೂ ಅಸ್ವಸ್ಥವಾಗುವಂತೆ ರಾಜನ ಸ್ಥಿತಿಯಾಯಿತು. ಕಿರಿಗಣ್ಣುಗಳಿಗೂ ವಿಶಾಲ ವಿಶ್ವವು ಗೋಚರವಾಗುವಂತೆ ರಾಜನ ತೀವ್ರ ಅಸ್ವಸ್ಥತೆಗೆ ತನ್ನ ಹೃದಯಸೂತ್ರಗಳು ದೂರ ಎಲ್ಲಿಯೋ ಕಟ್ಟಲ್ಪಟ್ಟಿವೆಯೆಂದು ಭಾಸವಾಗತೊಡಗಿತು. ಆ ಪವಿತ್ರ ಪ್ರಶಾಂತ ಪರಿಸರದಲ್ಲಿ ಕಾಲಿಟ್ಟಾಗಲೆಲ್ಲಾ ರಾಜನಿಗೆ ಅದೊಂದು ಆತ್ಮೀಯಭಾವವು ಅನಿಸತೊಡಗಿತು. ವೀಣೆಯ ನಾದದೊಡನೆ ಗಾಯಕನ ಸ್ವರವು ಏಕತಾನವಾಗುವಂತೆ, ರಾಜನ ಹೃದಯದಲ್ಲಿಯ ಮಂಜುಲ ಪ್ರೇಮನಾದವು ಆ ಪರಿಸರದಲ್ಲಿಯ ಪಾವಿತ್ರ್ಯದೊಡನೆ ಸಾಮರಸ್ಯವನ್ನು ಹೊಂದಿತು.

ಉರಿಬಿಸಿಲಿನಲ್ಲಿ ನಡೆಯುವಾಗ ಅಂಗಾಲು ಸುಟ್ಟರೂ ಸಂಯಮಿಯಾದ ಪಾಂಥನು ಸ್ಥಿರಮನಸ್ಸಿನಿಂದ ಮಾರ್ಗಕ್ರಮಣವನ್ನು ಮಾಡುವಂತೆ ರಾಜನು ತನ್ನ ಮನಸ್ಸನ್ನು ಅಂಕೆಯಲ್ಲಿಡಲು ಪ್ರಯತ್ನಿಸುತ್ತಿದ್ದನು. ರತ್ನಭೂಷಣಗಳಿಂದ ಮಂಡಿತನಾಗಿ ಯುವತಿಯ ಕಣ್ಣುಗಳನ್ನು ಕುಕ್ಕಿಸಬೇಕೆಂದು ಅವನಿಗೆಂದೂ ಅನಿಸಲಿಲ್ಲ. ಪಾವಿತ್ರ್ಯದ ಮಾಂಗಲ್ಯಮಯ ವೈಭವವು ಸೂರೆಗೊಂಡಿರುವಲ್ಲಿ ಮುತ್ತು-ರತ್ನಗಳಿಗೆ ಬೆಲೆಯೆಲ್ಲಿ? ಅತ್ಯಂತ ನಿರ್ಮಲ ನಿಶ್ಚಲ ಶಾಂತಿಯಲ್ಲಿ ರಾಜನ ಪರಿವಾರದ ಆಡಂಬರಕ್ಕೆ ಸ್ಥಾನವೆಲ್ಲಿ? ಪ್ರೇಮದ ರಾಜ್ಯದಲ್ಲಿ

ವಿಕಾರಗಳಿಗೆ-ವ್ಯಾಪಾರದ ಮನೋವೃತ್ತಿಗೆ ಎಡೆಯಿರದಂತೆ ಆ ಪವಿತ್ರ ಪರಿಸರದ ಮಂಗಲ ಸ್ವಾಮಿನಿಯೆದುರಿನಲ್ಲಿ ರಾಜ ವೈಭವಕ್ಕೆ ಮಾನ್ಯತೆಯಿಲ್ಲವೆಂದು ರಾಜನಿಗನಿಸತೊಡಗಿತು.

ಬೇನೆಯಿಂದ ಬಳಲುವ ಅವಯವವು ಮನುಷ್ಯನನ್ನು ಗಾಸಿಗೊಳಿಸಿಬಿಡುವಂತೆ ರಾಜನ ಮನಸ್ಸು ಅವನನ್ನು ಅಸ್ವಸ್ಥನನ್ನಾಗಿ ಮಾಡಿತು. ಮನಸ್ಸಿಗೆ ಹಾಯೆನಿಸಲೆಂದು ಆತನು ತನ್ನ ಸೇನಾಪತಿ ಧೀರನಾಥನನ್ನು ತನ್ನ ಬಳಿಯಲ್ಲಿಯೇ ಇರಿಸಿಕೊಂಡನು. ಧೀರನಾಥನ ಸಹವಾಸದಲ್ಲಿಯೂ ರಾಜನು ತನ್ನ ಮನಸ್ಸನ್ನು ಅಂಕೆಯಲ್ಲಿಟ್ಟುಕೊಳ್ಳಲಾರದೆಹೋದನು; ಅವನನ್ನು ಕೇಳದೆಯೆ ಅದು ಬೈಲಿನ ಕಡೆಗೆ ಧಾವಿಸಿ ಹೋಗುತ್ತಿತ್ತು. ಪಕ್ಷಿಗಳನ್ನೂ ಸ್ಥಾನಬದ್ಧಗೊಳಿಸಬಹುದು, ತುರು–ಕರುಗಳನ್ನು ಬಂಧಿಸಿಡಬಹುದು, ಗಾಳಿಯನ್ನೂ ಅಡ್ಡಗಟ್ಟಬಹುದು; ಆದರೆ ಮನಸ್ಸನ್ನು ಎಂತು, ಏತರಿಂದ ಕಟ್ಟಿಡಬಹುದು ? ರಾಜನ ಹೃದಯ ಮನಸ್ಸುಗಳು ಅವನಿಗೆ ಪ್ರತಿಯಾಗಿ ಬಂಡುಹೂಡಿದ ಮೇಲೆ ಅವನೇನು ಮಾಡಿಯಾನು ?

ಯುವತಿಯನ್ನು ಕಾಣಲು ರಾಜನ ಮನಸ್ಸು ತಳಮಳಿಸಹತ್ತಿತು. ಸಾಗರದತ್ತ ವೇಗದಿಂದ ಹರಿಯುವ ನದಿಯ ನೀರನ್ನು ಅಡ್ಡಗಟ್ಟಿದರೆ ಅದು ಪಾತ್ರದಲ್ಲಿ ಹಿಡಿಸದೆ ಹೋಗುವಂತೆ, ಸೂರ್ಯನ ಕಿರಣಗಳನ್ನು ವಿರುದ್ಧ ದಿಕ್ಕಿನಲ್ಲಿ ತಿರುಗಿಸಿದರೆ ಅವನ ತೇಜವು ಅವನಿಗೇ ಸಹನವಾಗದೆ ಹೋಗುವಂತೆ, ಉಸಿರಾಡುವುದನ್ನು ಪ್ರತಿಬಂಧಿಸಿದರೆ ಕಸಿವಿಸಿಯುಂಟಾಗುವಂತೆ, ರಾಜನ ಮನಸ್ಸು ಮೌನದ ಕಟ್ಟೆಯನ್ನೊಡೆದು ಉಚ್ಚಾರ ರೂಪದಲ್ಲಿ ಹೊರಬಿದ್ದಿತು. ರಾಜನು ಧೀರನಾಥನೆದುರಿನಲ್ಲಿ ತನ್ನ ಅಂತರಂಗವನ್ನು ವ್ಯಕ್ತಪಡಿಸಿದನು.

ಮಾತಿಯು ಮಗಳ ಮನೋಗತವನ್ನು ತಿಳಿದುಕೊಳ್ಳುವ ತೆರದಲ್ಲಿ ಧೀರನಾಥನು ರಾಜನ ಮಧುರ ರಹಸ್ಯವನ್ನು ತಿಳಿದುಕೊಳ್ಳತೊಡಗಿದನು.

ರಾಜನ ಸೇನಾಪತಿಯು ಧೀರನೂ ವೀರನೂ ವಿಚಾರಿಯೂ ಬುದ್ಧಿವಂತನೂ ಆಗಿದ್ದನು. ರಾಜನ ರಹಸ್ಯಕಥೆ ಕೇಳಿ ಅದನ್ನು ಪ್ರತ್ಯಕ್ಷವಾಗಿ ಪ್ರಮಾಣಿಸಿ ನೋಡಲು ಅವನು ಸ್ವಂತವಾಗಿ ಆ ರಮಣೀಯವಾದ ಬೈಲಿನ ಕಡೆಗೆ ಹೋದನು. ಕೃತ್ರಿಮ ಹಾಗೂ ಅಕೃತ್ರಿಮ ಸೌಂದರ್ಯಗಳೊಳಗಿನ ಭೇದವು ಅಲ್ಲಿ ಕಾಲಿಟ್ಟೊಡನೆಯೇ ಅವನಿಗೆ ತೋರಿಬಿಟ್ಟಿತು. ರೂಕ್ಷ ಬುದ್ಧಿಯ ನೀರಸತೆ-ಹೃದಯದ ಆತ್ಮೀಯತೆ ಇವುಗಳಲ್ಲಿಯ ಅಂತರವು ಒಮ್ಮೆಲೆ ಗೋಚರವಾಯಿತು. ಶೃಂಗಾರದ ರಂಗುರಂಗಿನ ಹಾಡಿನಲ್ಲಿಯೂ ಪ್ರೇಮದ ಮೃದುಲ ಮಂಜುಲ ಗೀತದಲ್ಲಿಯೂ ಇರುವ ವ್ಯತ್ಯಾಸವು ಅವನಿಗೆ ತಟ್ಟನೆ ಕಂಡುಬಿಟ್ಟಿತು. ಕುಂಕುಮತಿಲಕದಂತಿರುವ ಕೆಂಪನ್ನ ಗಿಡಮರಗಳು ಅಲ್ಲಲ್ಲಿ ಬೆಳೆದು ಕಣ್ಣಿಗೆ ಗಡ್ಡವಾಗಿ ತೋರುವ ಆ ಬೈಲಲ್ಲಿ ಕೊಂಚ ವಿಶ್ರಮಿಸಿ, ಅಲ್ಲಿಯ ವಾತಾವರಣದಲ್ಲಿಯ ಆನಂದರಸವನ್ನೀಂಟಿ, ಧೀರನಾಥನು ಅರಮನೆಗೆ ಮರಳಿದನು.

ಮರುದಿನ ಧೀರನಾಥನು ರಾಜೋದ್ಯಾನದಲ್ಲಿಯ ಪುಷ್ಪಗಳನ್ನು ಆರಿಸಿಕೊಂಡು, ಯುವತಿಯ ಗುಡಿಸಲಿನ ಅಂಗಳದವರೆಗೆ ಬಂದನು. ಯುವತಿಯು ಗಾನಾನಂದದಲ್ಲಿ ತಲ್ಲೀನಳಾಗಿದ್ದಳು. ಆ ವಿಮಲಸ್ವರೂಪವನ್ನು ನೋಡಿ ಧೀರನಾಥನಿಗೆ ಆನಂದವಾಯಿತು. ಸಾರಲ್ಯದಿಂದೊಡಗೂಡಿದ ಆ ಅನುಪಮ ಶಾಂತಲಾವಣ್ಯವು ಅವನನ್ನು ಮಂತ್ರಮುಗ್ಧನಂತೆ ಮಾಡಿತು. ಯುವತಿಯ ಮಿತ್ರಪರಿವಾರವನ್ನು ನೋಡಿಯಂತೂ ಆತನು

ವಿಸ್ಮಿತನಾದನು. ಗಾನಭಂಗವಾಗಬಾರದೆಂದು ಹೆಜ್ಜೆಯ ಸಪ್ಪಳವನ್ನೂ ಮಾಡದೆ ಮೆಲ್ಲನೆ ಹೂಗಳನ್ನು ಪೂರ್ವಾಭಿಮುಖವಾಗಿ ಇಟ್ಟು ಧೀರನಾಥನು ಹಿಂದಿರುಗಿದನು. ಇದರಂತೆ ಹಲವು ದಿನ ಧೀರನಾಥನು ಪ್ರತಿನಿತ್ಯ ಹೂಗಳನ್ನೊಯ್ದು ಗಾನಾನಂದತನ್ಮಯಳಾದ ಯುವತಿಯೆದುರಿಗೆ ಇಟ್ಟು, ಅವಳ ತಲ್ಲೀನತೆಗೆ ಭಂಗವಾಗಬಾರದೆಂದು ಮೆಲ್ಲಡಿಯಿಂದ ಹಿಂದಿರುಗುತ್ತಿದ್ದನು.

ಅದೇ ಅರಳಿದ ಹೂಗಳನ್ನು ದಿನಾಲು ತಂದಿಡುವವರು ಯಾರೆಂದು ಯುವತಿಯು ಒಂದು ದಿನ ಅಂಗಣಕ್ಕೆ ಬರುವಷ್ಟರಲ್ಲಿ ಧೀರನಾಥನು ಅಲ್ಲಿಗೆ ಬಂದು ತಲುಪಿದನು. ಯುವತಿಯನ್ನು ಕಂಡೊಡನೆ ಅಂಜಲಿ ಮುಂದು ಮಾಡಿ ಆ ಪುಷ್ಪಗಳನ್ನು ಅರ್ಪಿಸಿದನು. ಪುಷ್ಪಗಳನ್ನು ನೋಡುತ್ತಲೆ ಯುವತಿಯು ಅವುಗಳನ್ನೆತ್ತಿ ನಿರುಕಿಸುತ್ತ ನಿಂತಳು. ಸೌಂದರ್ಯಕ್ಕೆ ಸೌಂದರ್ಯದ ಮುಖವಾಡವನ್ನೇ ಹಾಕುವಂತೆ, ಮಾಂಗಲ್ಯಕ್ಕೆ ಮಾಂಗಲ್ಯದ ತಿಲಕವನ್ನೇ ಹಚ್ಚುವಂತೆ, ಪಾವಿತ್ರ್ಯಕ್ಕೆ ಪಾವಿತ್ರ್ಯದ ಅಲಂಕಾರವನ್ನೇ
ಪ್ರೇಮಕ್ಕೆ ಪ್ರೇಮದ ವಸ್ತ್ರವನ್ನೇ ಉಡಿಸುವಂತೆ ಆ ಮನೋಹರ ಪುಷ್ಪಗಳು ಯುವತಿಗೆ ತೋರಿದವು.

“ಇಷ್ಟು ಸುಂದರ ಸತೇಜ ಪುಷ್ಪಗಳನ್ನು ನೀವೆಲ್ಲಿಂದ ತಂದಿರಿ?”—ಎಂದು ಯುವತಿಯು ಧೀರನಾಥನಿಗೆ ಕೇಳಿದಳು. “ರಾಜಪ್ರಾಸಾದದಿಂದ” ಎಂದು ಧೀರನಾಥನು ಉತ್ತರಿಸಿದನು. “ಪ್ರಾಸಾದದ ಸ್ವಾಮಿಯು ತನ್ನ ಕೈಯಿಂದಲೇ ಈ ಹೂಗಳನ್ನು ಆರಿಸಿ, ಇಲ್ಲಿಯ ಪಾವಿತ್ರ್ಯಕ್ಕೆ ಏರಿಸಲೆಂದು ನನ್ನೊಡನೆ ಕಳಿಸುತ್ತಾನೆ.”

ಯುವತಿ : ಈ ಸುಗಂಧಿತ ಪ್ರೇಮಭರಿತ ಪುಷ್ಪಗಳನ್ನು ರಾಜನು ಯಾವ ಉದ್ದೇಶದಿಂದ ಕಳಿಸುತ್ತಿದ್ದಾನೆ? ನಗರದಿಂದ ದೂರವಿರುವ ಈ ಸ್ಥಾನವು ರಾಜನಿಗೆಂತು ಗೊತ್ತಾಯಿತು ?

ಧೀರನಾಥ : ಇಲ್ಲಿಯ ಗಾನರವವೇ ಈ ಸ್ಥಾನವನ್ನು ರಾಜನಿಗೆ ತೋರಿಸಿತು. ಇಲ್ಲಿಯ ಪಾವಿತ್ರ್ಯವು ಅವನನ್ನು ಮುಗ್ಧಗೊಳಿಸಿಬಿಟ್ಟಿತು. ಇಲ್ಲಿಯ ಮಾಂಗಲ್ಯಕ್ಕೆ ರಾಜನು ತನ್ನ ಕಾಣಿಕೆ ಸಲ್ಲಿಸುತ್ತಿರುವನು.

ಹೀಗೆಂದು ಧೀರನಾಥನು ಏನೂ ಮುಚ್ಚುಮರೆ ಮಾಡದೆ ಯುವತಿಯೆದುರು ಎಲ್ಲ ಧನವನ್ನು ಮಾಡಿದನು. ಯುವತಿಯು ಕೇಳಿಕೊಂಡು, ಆ ಪುಷ್ಪಗಳಲ್ಲಿಯ ಒಂದನ್ನು ನೀಲನಭದತ್ತ ತೂರಿ, ಕ್ಷಣಮಾತ್ರ ಮೇಲಕ್ಕೆ ದೃಷ್ಟಿಯನ್ನು ಬೀರಿ, "ಧೀರನಾಥ, ನಾಳೆ ನಿಮ್ಮ ರಾಜನನ್ನು ಕರೆದುಕೊಂಡು ಬನ್ನಿರಿ" ಎಂದು ಉಸುರಿದಳು.

ಆಮ್ರತರು ಹೊಸ ಚಿಗುರುಗಳಿಂದ ಶೋಭಿಸುವಂತೆ ಧೀರನಾಥನು ನವೋತ್ಸಾಹದಿಂದ ನಲಿದಾಡಿದನು. ಆಸೆಯ ಉದ್ಯಾನವೇ ಅರಳಿನಿಂತಂತೆ ಅವನಿಗೆನಿಸಿತು. ಹಕ್ಕಿಯಾಗಿ ಹಾರಿಹೋಗಿ ಯುವತಿಯ ಸಂದೇಶವನ್ನು ರಾಜನಿಗೆ ಅರುಹಲೇ, ಮೋಡವಾಗಿ ಓಡಲೇ, ಬಾಣಕ್ಕೆ ಸಂದೇಶ ಹೇಳಿಬಿಡಲೇ ಎನಿಸಿತು. ಮನಸ್ಸಿನಲ್ಲಿ ತುಂಬಿಬಂದ ಆಶಾಯುಕ್ತ ವಿಚಾರಗಳಿಂದ ಅವನ ಹೆಜ್ಜೆಗಳು ವೇಗದಿಂದ ಬೀಳತೊಡಗಿ, ಅವನು ಪ್ರಾಸಾದಕ್ಕೆ ಬಂದು ತಲುಪಿದನು.

ಯುವತಿಯ ಸಂದೇಶ ಕೇಳಿ ರಾಜನ ಸಂತೋಷಕ್ಕೆ ಎಣೆಯಿಲ್ಲದಾಯಿತು. ಅವನ ಆನಂದಕ್ಕೆ ಆಕಾಶವೂ ಚಿಕ್ಕದೆನಿ

ಸಿತು. ಧೋಧೋ ಮಳೆ ಸುರಿಯುವಾಗ ಹೊಳೆಹಳ್ಳಗಳು, ಕೆರೆ ಬಾವಿಗಳು ತುಂಬಿಯೂ ಮತ್ತೆ ನೀರು ಕಂಡತ್ತ ಹರಿಯು ವಂತೆ ರಾಜನ ಆನಂದವು ಸರ್ವಾಂಗದಲ್ಲಿ ಪ್ರವಹಿಸಿಯೂ ಮತ್ತೂ ಹೊರಚೆಲ್ಲಿತು. ಮಾಂಡಲಿಕನಿಗೆ ಸಮ್ರಾಟನ ಪದ ದೊರೆತರೆ, ನಿಷ್ಕಾಂಚನನ ಅಂಗಳದಲ್ಲಿ ಸುವರ್ಣವೃಷ್ಟಿ ಯಾದರೆ, ಜೀನಹಂಕನ ಬಾಗಿಲಲ್ಲಿ ಹಣದ ಮರ ಹಣ್ಣು ಬಿಟ್ಟರೆ, ನಿಪುತ್ರಿಕನಿಗೆ ಏಳು ಪೀಳಿಗೆಗಳನ್ನು ಉದ್ಧರಿಸುವ ಸುಪುತ್ರನಾಗುವನೆಂದು ಹರಕೆಯಾದರೆ ಆಗುವ ಆನಂದಕ್ಕಿಂ ತಲೂ ಹೆಚ್ಚಿನ ಆನಂದವು ರಾಜನಿಗಾಯಿತು. ಹಾಲ್ದುಂಬಿದ ಕಾಳುಗಳಿಂದ ತೆನೆಯು ಶೋಭಿಸುವಂತೆ ರಾಜನ ಮನಸ್ಸು ಆನಂದತುಂದಿಲವಾಯಿತು. ಬರಿಯ ಬಟ್ಟಲಲ್ಲಿ ನೀರು ತುಂಬಿ, ನೀರಲ್ಲಿ ಮುಳುಗಿಹೋಗುವಂತೆ ರಾಜನು ಉಲ್ಲಾಸದ ಮಡುವಿನಲ್ಲಿ ಮುಳುಗಿದನು. ಚುಮು ಚುಮು ನಸುಕಿನಲ್ಲಿ ಸಿದ್ದೆ ತಿಳಿದೆದ್ದ ಕೂಸಿನ ಪ್ರಫುಲ್ಲತೆಯು ರಾಜನ ಮುಖದ ಮೇಲೆ ಮಿನುಗತೊಡಗಿತು. ವಿಜಯಿ ವೀರನು ಮತ್ತೆ ಹೊಸ ಪ್ರದೇಶಗಳನ್ನು ಗೆಲ್ಲಲು ನವೋತ್ಸಾಹದಿಂದ ಸನ್ನದ್ಧನಾಗು ವಂತೆ ರಾಜನು ಯುವತಿಯನ್ನು ಬೆಟ್ಟಿಯಾಗಲು ಸಿದ್ಧ ನಾದನು.

ವೀರ ಧೀರನಾಥನು ಸೈನ್ಯದ ಮೇಲ್ವಿಚಾರಣೆಯನ್ನು ವಹಿಸಿಕೊಂಡು ರಾಜ್ಯದ ರಕ್ಷಣೆಯನ್ನು ಮಾಡುತ್ತಿದ್ದರೂ, ರಾಜನ ಜೀವನದಲ್ಲಿಯ ಅತಿ ಕೋಮಲವಾದ, ಅತಿ ಮೃದುಲ ವಾದ ಪ್ರೇಮತಂತುಗಳ ನಯವಾದ ಹೆಣಿಕೆಯನ್ನು ಬಿಡಿಸಿ ಬಿಚ್ಚಿಡುವ ಸೂಕ್ಷ್ಮಕಲೆಯು ಅವನಿಗಿನ್ನೂ ಸಾಧಿಸಿರಲಿಲ್ಲ. ಯುವತಿಯ ಬೆಟ್ಟಿಯಿಂದಾಗುವ ಸುಪರಿಣಾಮಗಳ ಮಂಗಲ

ಚಿತ್ರವು ಅವನ ಮನಶ್ಚಕ್ಷುವಿನೆದುರಿಗೆ ಸ್ಪಷ್ಟವಾಗಿ ಮೂಡದ್ದರಿಂದ, ಆತನು ಸ್ವಭಾವೋಚಿತ ಧೀರ ಸೂಚನೆಗಳನ್ನು ರಾಜನಿಗೆ ಮಾಡತೊಡಗಿದನು. ಸುದ್ಗುಣಸಂಪನ್ನ ರಾಜನ ರಾಜತ್ವಕ್ಕೆ ಕಿಂಚಿತ್ತಾದರೂ ಊನತೆ ತರುವ ಪ್ರಸಂಗಗಳು ಬರಬಾರದೆಂಬ ತೀವ್ರ ಇಚ್ಛೆಯು ಸುತ್ತುಮುತ್ತು ಹಲವು ವಿಚಾರಗಳ ಹೆಣಿಕೆಯನ್ನು ಹೆಣೆಯತೊಡಗಿದನು. ವಿಕಾರವಶತೆಗೆ ಪ್ರೇಮದ ಹೆಸರನ್ನಿಟ್ಟು ಜನರು ಕಣ್ಣುಮುಚ್ಚಾಟವಾಡುವುದನ್ನು ಅವನು ಹಲವು ಸಲ ನೋಡಿದ್ದನು. ನಾಟಕೀಯ ರೀತಿಯಲ್ಲಿ 'ಪ್ರಿಯಾರಾಧನೆ' ಮಾಡಿ ಅದನ್ನೊಂದು ಭೂಷಣವೆಂದು ಬಗೆಯುವ ಅಲ್ಪವಿಚಾರದ ಹಲವು ಪ್ರೇಮವೀರರನ್ನು ಆತನು ಕಂಡಿದ್ದನು. ಹಾಗೆಯೇ ಪುರುಷಾರ್ಥದ ಕರ್ತೃತ್ವಶಕ್ತಿಯಿಂದ ಸುಶೀಲ ಲಲನೆಯರ ಮನಸ್ಸನ್ನಾಕರ್ಷಿಸಿದ ಎಷ್ಟೋ ಪುರುಷ ಸಿಂಹರನ್ನೂ ಆತ ನೋಡಿದ್ದನು. ಏನೆ ಆದರೂ ಪ್ರೇಮದ ಹೆಸರಿನಲ್ಲಿ ಪ್ರಣಯಭಿಕ್ಷೆಯನ್ನು ಬೇಡುವುದು ಪುರುಷಾರ್ಥಕ್ಕೆ ಸಲ್ಲದ ಸಂಗತಿಯೆಂದು ಆತನು ತಿಳಿದಿದ್ದನು. ವ್ಯಕ್ತಿತ್ವದ ಸ್ವಾಭಿಮಾನಕ್ಕಾಗಿ ರಾಜನು ಯುವತಿಯ ಆರಾಧನೆಯನ್ನು ಮಾಡಬಾರದೆಂದು ಅವನು ಬಗೆದಿದ್ದನು. ಅಷ್ಟೇ ಅಲ್ಲ, ವ್ಯಕ್ತಿತ್ವದ ತಕ್ಕಡಿಯಲ್ಲಿ ರಾಜನದೂ ಯುವತಿಯದೂ ಸಮ ತೂಕವಾಗಬೇಕೆಂತಲೂ ಅವನಿಗೆನಿಸುತ್ತಿತ್ತು. ಅದೇಕೆ, ತೂಕ ನೋಡುವುದೇ ಆದರೆ ರಾಜನದೇ ಹೆಚ್ಚಾಗಬೇಕೆಂತಲೂ ಅವನ ಮನಸ್ಸು ಹೇಳುತ್ತಿತ್ತು.

ಧೀರನಾಥನೊಡನೆ ರಾಜನು ಯುವತಿಯ ಅಂಗಳಕ್ಕೆ ಬಂದಾಗ ಅವಳು ಗಾನಾನಂದದಲ್ಲಿ ತಲ್ಲೀನಳಾಗಿದ್ದಳು. ಮಂದಾನಿಲನು ತೀಡುತ್ತಿದ್ದನು. ಮರಗಳ ಎಲೆಗಳು ಮೃದುಲ

ವಾಗಿ ಸಪ್ಪಳ ಮಾಡುತ್ತಿದ್ದವು. ಪಕ್ಷಿಗಳು ಕೂಜಿಸುತ್ತಿದ್ದವು. ನವಿಲುಗಳು ಗರಿಗೆದರಿ ನರ್ತಿಸುತ್ತಿದ್ದವು. ಉದುರುವ ಮಳೆ. ವನಿ ನೋಡಿ ಆಡುವ ಮಕ್ಕಳು ಹಿಗ್ಗಿನಿಂದ ಕೆಲೆದಾಡುವಂತೆ ರಾಜನ ಮನಸ್ಸು ಸುಖವನ್ನು ಸೂರೆಗೊಂಡಿತು. ಆ ರಮ್ಯ ಪರಿಸರದ ವಿಮಲ ಸ್ವಾಮಿನಿಯನ್ನು ಕಂಡು ರಾಜನ ವ್ಯಾಕುಲ ಚಿತ್ತವು ಸಮಾಧಾನವನ್ನು ಹೊಂದಿತು. ನಿದ್ದೆ ತೀರಿದೊಡನೆ ಮುಚ್ಚಿದ ಕಣ್ಣುಗಳು ತಂತಾವೇ ತೃಪ್ತಿಯಿಂದ ತೆರೆಯುವಂತೆ ರಾಜನ ಕಣ್ಣುಗಳಿಗೆ ಆ ಮಂಗಲೆಯನ್ನು ಕಂಡೆನಿಸಿತು.

ಗಾನವು ಮುಗಿದೊಡನೆ ಯುವತಿಯು ಮೃದುಮಧುರಲ ಸ್ಮಿತದಿಂದ, ಪ್ರಸನ್ನವದನದಿಂದ ರಾಜನನ್ನೂ ಧೀರನಾಥ ನನ್ನೂ ನೋಡಿದಳು. ಧೀರನಾಥನು ಮುಂದರಿದು ಎಂದನು—
"ಇವರು ಮನಪುರದ ದೊರೆ ಭಾವನಾಥರು !"

ಯುವತಿಯೆಂದಳು— "ರಾಜರೇ! ಕೃಷ್ಣಪ್ರೇಮದ ಸುಧಾರಸ ಸೇವಿಸಲು ಧೀರನಾಥರೊಡನೆ ತಾವು ಇಲ್ಲಿದ್ದು ಬಿಡಿ."

ಯುವತಿಯ ನುಡಿ ಕೇಳಿ ರಾಜನ ಆನಂದಕ್ಕೆ ಹಿರಿಸೆರೆ ಬಂದಿತು. ಹುಣ್ಣಿಮೆಯಲ್ಲಿ ಕಡಲು ಮೇರೆಮೀರಿ ಉಕ್ಕಿಬರುವಂತೆ ಅವನ ಹೃದಯುಕ್ಕಾಯಿತು.

ಯುವತಿಯ ಬೆಟ್ಟಿಯಾದೊಡದೆ ಆವಳ ಶಾಂತ ಶ್ಯಾಮಲ ರೂಪವನ್ನು ಕಣ್ದಣಿ ಉಂಟುವುದು, ಕಿವಿಗಳು ತಣಿಯುವನಕ ಅವಳ ಗಾನವನ್ನು ಕೇಳುವುದು ಎಂದು ರಾಜನು ಸಂಕಲ್ಪಿಸಿದ್ದನು. ಈ ಯೋಚನೆಯನ್ನು ಮೆಲುಕಾಡಿಸುತ್ತ ಆದನ್ನು ಹೆಚ್ಚು ಹೆಚ್ಚು ದೃಢವಾಗಿ ಮಾಡಿಕೊಂಡಿದ್ದನು. ಆದರೆ ಯುವತಿಯ ಗಾನದ ಧ್ವನಿಯ ಆಘಾತವು ಕಿವಿಗಾದೊಡನೆ

ಅವನ ವಿಚಾರವೆಲ್ಲಿ ಹೋಯಿತೋ ! ಏಟುಕೊಟ್ಟ ಕೂಡಲೆ ಚಂಡು ಆಟದ ಬಯಲಿನಾಚೆಗೆ ತೂರಿಹೋಗುವಂತೆ ರಾಜನ ಲಕ್ಷ್ಯವು ಆ ಗಾನರವದ ಜೊತೆಗೆ ಎಲ್ಲಿಗೋ ಓಡಿತು. ಮನಸ್ಸಿನ ನಿಶ್ಚಯವನ್ನು ಬಿಟ್ಟೋಡಿತು. ಯುವತಿಯ ರೂಪ ಸೌಂದರ್ಯವನ್ನು ಮನದಣಿ ಕುಡಿಯುವುದನ್ನು ಮರೆತು ಬಿಟ್ಟು, ಕಣ್ಣುಗಳು ತಂತಾವೇ ಮುಚ್ಚಿಕೊಂಡವು. ಗಾಳಿಗೆ ಹೂವು ತೂಗಾಡುವಂತೆ ರಾಜನ ಶಿರಸ್ಸು ಆ ಗಾನಾನಂದದ ಲಹೆರಿಯಲ್ಲಿ ಒಲೆದಾಡಿತು. ಭ್ರಮರವು ಮಕರಂದವನ್ನು ಸೇವಿಸುವಂತೆ ಅವನ ಮಾನಸವು ಗಾನಸುಧಾರಸವನ್ನು ಸೇವಿಸ ತೊಡಗಿತು. ಶ್ರೀಕೃಷ್ಣ ಪ್ರೇಮ ಸುಧಾರಸವನ್ನು ಸೇವಿಸುತ್ತ ಭಾವನಾಥನು ಪ್ರೇಮಸುಧಾರಸವೇ ಆದನು. ' ನೀನು ನಾನು ' ಎಂಬ ದ್ವೈತದ ಪರದೆಯು ಆ ಪ್ರೇಮಸುಧಾರಸದಲ್ಲಿ ತಪತಪ ತೊಯ್ದು ಕರಗಿಹೋಯಿತು. ದ್ವೈತದಾಚೆಯ ಅನಂತವಿಶ್ವದ ಬಾಗಿಲು ತೆರೆಯಿತು. ಅಲ್ಲಿಯ ಅನಿರ್ವಚನೀಯ ಅನುಭವದಲ್ಲಿ ರಾಜನು ತನ್ನನ್ನು ತಾನು ಮರೆತು ಬಿಟ್ಟನು.

ಗಗನಾಂಗಣವು ಬಣ್ಣ ಬಣ್ಣಗಳಿಂದ ತಳಿ ಹಾಕಿದಂತಾಗಿತ್ತು. ಮೂಡಲ ದಿಕ್ಕಿನಲ್ಲಿ ಮಾಣಿಕ್ಯದ ತೋರಣವನ್ನು ಕಟ್ಟಿದಂತಿತ್ತು. ರವಿರಾಜನು ಪ್ರಸನ್ನಮುಖದಿಂದ ಹಣಿಯಿಕ್ಕುತ್ತಿದ್ದನು. ಯುವತಿಯು ಶ್ರೀಕೃಷ್ಣ ಪ್ರೇಮದಲ್ಲಿ ಮೈಮರೆತು ನರ್ತಿಸುತ್ತಿದ್ದಳು. ಅವಳು ಛಂ ಛಂ ಕುಣಿಯುವಾಗ ಅವಳ ನೂಪುರಗಳ ಝುಣತ್ಕಾರದಲ್ಲಿ ' ಕೃಷ್ಣ ಕೃಷ್ಣ ' ಎಂಬ ಧ್ವನಿ ಹೊರಡತೊಡಗಿತು. ಸಕಲ ಪರಿಸರವು ಕೃಷ್ಣಮಯವಾಯಿತು. ಶ್ರೀಕೃಷ್ಣನ ಮುರಲೀರವವು ಅಖಿಲ ಚರಾ

ಚರವನ್ನು ತುಂಬಿಬಿಟ್ಟಿತು. ಯುವತಿ ಭಕ್ತಿಮತಿಯ ಭಕ್ತಿಯ ಗಾಳಿ ದಿಕ್ಕು ದಿಕ್ಕಿನಲ್ಲಿ ಬೀಸಿತು.

ನಾಗರಹಾವಿನ ಮರಿಯು ಅಂಗಾಂಗವನ್ನು ಅಲ್ಲಾಡಿಸುವಂತೆ ಭಾವನಾಥನು ತನ್ನ ಭಾವನೆಯ ತಂದ್ರೆಯಿಂದ ಹೊರಬಿದ್ದು ಮೈಕೈ ಅಲ್ಲಾಡಿಸತೊಡಗಿದನು. ಕೊಡ ತುಂಬಿದ ಮೇಲೆ ನೀರು ಹೊರಚೆಲ್ಲುವಂತೆ ಅವನ ಸ್ತಬ್ಧವಾಣಿಯು ಸ್ಫೂರ್ತಿಯಿಂದ ಉಲಿಯತೊಡಗಿತು. ಭಾವನಾಥನು ಹಾಡತೊಡಗಿದನು. ಪ್ರೇಮಾನಂದದಿಂದ ಕುಣಿಯತೊಡಗಿದನು. ಭಾವನಾಥ–ಭಕ್ತಿಮತಿಯರಿಬ್ಬರೂ ಕುಣಿಕುಣಿಯುತ್ತ ಹತ್ತಿರ ಬಂದಾಗ ಇಬ್ಬರ ಕೈಗಳೂ ಒಂದಕ್ಕೊಂದು ತಾಕಿದವು; ಒಂದನ್ನೊಂದು ಕುಲುಕಿದವು. ಅವರ ಕರರೂಪ ಹಾರವನ್ನು ಸ್ವೀಕರಿಸಲು, ಭಗವಾನ್ ಶ್ರೀಕೃಷ್ಣನು ಅವರ ತೋಳತೆಕ್ಕೆಯಲ್ಲಿ ಪ್ರಕಟನಾದನು. ಭಾವನಾಥನೂ ಭಕ್ತಿಮತಿಯೂ ಕಣ್ಣುತೆರೆದರು.

ಭಾವ–ಭಕ್ತಿಗಳ ಮಿಲನವಾಯಿತು. ಮೋಡಗಳು ಕರಗುತ್ತ ಅದೃಶ್ಯವಾಗುವಂತೆ ಭಾವ–ಭಕ್ತಿಗಳು ಪ್ರೇಮಸ್ವರೂಪ ಪರಮಾತ್ಮನಲ್ಲಿ ವಿಲೀನವಾದವು.

# ಗೃಹಪ್ರವೇಶ

ನಮ್ಮೂರಿಗೆ ಮಾಧವ ಬರಲಿದ್ದಾನೆಂಬ ವಾರ್ತೆ ಊರಲ್ಲೆಲ್ಲ ಹಬ್ಬಿದಂತೆ ನನ್ನ ಕಿವಿಗೂ ಬಂದಿತು. ಅವನ ಚರಣಧೂಳಿ ಹತ್ತಬೇಕೆಂದು ಕೆಲವು ಜನರು ಅವನನ್ನು ಕರೆಯುವವರೇ! ಹಾಗೆ ತಾನೂ ಕರೆಯಬೇಕೆಂದು ನನಗೆನಿಸಿತು. ಪರವೂರ ವಿದ್ವಾಂಸನೊಬ್ಬನು ತಮ್ಮೂರಿಗೆ ಬಂದರೆ ಎಷ್ಟು ಜನ ಅವನ ಸುತ್ತು ಕಿಕ್ಕಿರಿದು ನೆರೆಯುತ್ತಾರೆ! ಎಷ್ಟು ಜನ ಆಮಂತ್ರಣ ಕೊಡುತ್ತಾರೆ! ಎಷ್ಟು ಜನ ಭೆಟ್ಟಿಗಾಗಿ ಹಾತೊರೆಯುತ್ತಾರೆ! ಈತನಂತೂ ಮಾಧವ! ಅವನು ನನ್ನ ಮನೆಗೆ ಬರುವುದು ಅದೆಂತು ಸಾಧ್ಯ? ಈ ಶಂಕೆ ನನಗೆ ಬಾರದೇ ಇರಲಿಲ್ಲ. ಆದರೂ ಅನಿಸಿತು—ಕರೆದೇಬಿಡಬೇಕೆಂದು! ಮತ್ತೆ ಆತ ಬಂದರೆ ನನ್ನ ಶಕ್ತಿಗೆ ತಕ್ಕಂತೆ ಅವನಿಗೆ ಶೋಭಿಸುವ ಹಾಗೆ ಆದರಾತಿಥ್ಯ ಸ್ವಾಗತವನ್ನಂತೂ ಮಾಡಲೇಬೇಕಷ್ಟೇ? ನಾನು ಚಟ್ಟನೆದ್ದೆ, ಮನೆಯ ಕಸಗುಡಿಸಿದೆ, ಹಾದಿಯಲ್ಲಿಯ ಸಾಮಾನು-ಸದಕಲು ಬದಿಗೆ ಮಾಡಿದೆ, ಚಾಪೆ ಹಾಸಿದೆ, ನೀರ ತಂಬಿಗೆ ತುಂಬಿಟ್ಟೆ, ಹಣ್ಣುಹಂಪಲು ತಂದಿಟ್ಟೆ, ಕೇಶರೀ ಹಾಲು ಮಾಡಿಟ್ಟೆ ಹಾಗೂ ಶೀರಜ್ಜಿಗೆ ಮಾಡುವ ತಯಾರಿ ನಡೆಯಿಸಿದೆ! ಎಲ್ಲ ಒಬ್ಬಳೇ ಮಾಡುವವಳು! ಅಂದಮೇಲೆ ಹೊತ್ತು ಆಗಲೇಬೇಕು! ಎಲ್ಲಾ ಮನಸ್ಸಿಗೆ ತಕ್ಕಂತೆ ಆಗಬೇಕಾದರೆ ಹೊತ್ತು ಆಗಲೇಬೇಕಷ್ಟೇ! ಎಲ್ಲಾ ಕೆಲಸ ಮುಗಿಸಿ ಮಾಧವ ಬರುವ ಮನೆಯತ್ತ ಹೊರಟೆ. ಹಾದಿಯಲ್ಲಿಯೇ ತಿಳಿಯಿತು— ಮಾಧವನು ಆ ಮನೆಗೆ ಬಂದು

ಹೋದನೆಂದು ! ಇದು ತಿಳಿದೊಡನೆ ನನ್ನ ಮನಸ್ಸಿಗೆ ಎಂತಾ ಗಿರಬಹುದು ! ಇಡಿಯ ದಿನ ಪ್ರವಾಸದ ಸಿದ್ಧತೆ ಮಾಡಿ, ಮಡದಿಮಕ್ಕಳ ಜಂಜಾಟ ಸಂಭಾಳಿಸಿ, ಯಜಮಾನನು ಸ್ಟೇಶನ್ನಿಗೆ ಬಂದು ತಿಕೆಟ್ಟು ಸಿಕ್ಕುವುದರೊಳಗಾಗಿಯೇ ರೈಲು ಬಂಡಿ ಹೊರಟು-ಹೋದರೆ ಎಂತೆನಿಸಬೇಕೋ ಅಂತೆನಿಸಿತು ! ಆದರೇನು ಮಾಡುವುದು ! ನಿರುತ್ಸಾಹಳಾಗಿ ಮನೆಗೆ ಮರಳಿದೆ. ಆದರೆ ಈ ಪ್ರಸಂಗದಿಂದ ನಾನು ಎಚ್ಚತ್ತೆ. ಹಾಗೂ, ಹೆರರ ಮನೆಗೆ ಮಾಧವ ಬಂದಾಗ ಅವನನ್ನು ಕರೆಯುವುದಕ್ಕಿಂತ ನಾನೇ ಅವನನ್ನು ನಮ್ಮ ಮನೆಗೆ ಕರೆದರೆ ಬಂಗಾರವಾದೀತು ಎಂದು ನಿರ್ಣಯಿಸಿದೆ! ಹೀಗಾದರೆ ಅವನು ಬರುವುದು ಖಂಡಿತ ಎನಿಸಿತು ! ಏಕೆಂದರೆ ಎಷ್ಟೋ ಜನರ ಆಮಂತ್ರಣವನ್ನು ಆತನು ಆನಂದದಿಂದ ಸ್ವೀಕರಿಸುತ್ತಾನೆ ! ಹಲವರ ಮನೆಗೆ ಆತ್ಮೀಯತೆಯಿಂದ ಆತ ತಾನಾಗಿ ಹೋಗುತ್ತಾನೆ! ಹಿರಿಯರು ಕಿರಿಯರು, ಬಡವರು ಬಲ್ಲಿದರು, ಜಾತಿಗೋತ್ರ, ಸ್ತ್ರೀ-ಪುರುಷರು ಎಂಬ ಭೇದಭಾವನೆ ಅವನಿಗಿಲ್ಲವೇ ಇಲ್ಲ ! ಅಂದಮೇಲೆ ಇನ್ನಾವ ತೊಡಕು ? ಹೀಗೆ ತುಂಬಾ ಆಲೋಚಿಸಿ ಅವನನ್ನು ಕರೆಯಬೇಕಾಗಿ ನಾನು ಗೊತ್ತುಮಾಡಿಕೊಂಡೆ. ಒಬ್ಬ ಬಾಲಕನನ್ನು ಕರೆದು, ಬೊಗಸೆ ತುಂಬ ತಿನಿಸುಕೊಟ್ಟು, ರಂಬಿಸಿ, ನನ್ನ ಪತ್ರ ಮಾಧವನಿಗೆ ಕೊಡಬೇಕೆಂದು ಹೇಳಿ, ಪತ್ರ ಬರೆಯಲು ಕುಳಿತೆ.—

ಜೀವನಪುರಿ

ಪ್ರಿಯ ಮಾಧವ ! ದಿ............

ನಿನ್ನ ನನ್ನ ಪರಿಚಯವಿಲ್ಲ. ಆದರೂ ಉಕ್ಕಿಬರುವ ಭಾವನೆಗಳು ಈ ಪತ್ರ ಬರೆಯಲು ಹಚ್ಚಿವೆ ! ಈ ಪತ್ರವೆಂದರೆ ನಿನಗೆ ನನ್ನ ಪ್ರಾರ್ಥ

ನೆಯು ! ಒಮ್ಮೆ ಯಾದರೊ ನನ್ನ ಮನೆಗೆ ಬಂದು ಚರಣಧೂಳಿ ಹಾಕ ಬೇಕೆಂದು ನನ್ನ ಬಿನ್ನಹವಿದೆ. ನನ್ನ ಪ್ರಾರ್ಥನೆಯನ್ನು ನೀನು ತಿರಸ್ಕರಿಸಲಿಕ್ಕಿಲ್ಲವಷ್ಟೇ ! ಹಲವರಿಗೆ ನೀನು ಪ್ರಂಚಪ್ರಾಣ! ಎಲ್ಲರಂತೆ ನನ್ನನ್ನೂ ಸಮದೃಷ್ಟಿಯಿಂದಲೇ ನೋಡುವಿಯೆಂದು ನಂಬಿದ್ದೇನೆ.

ನಿನ್ನ ಉತ್ತರದ ಬರುವಿಕೆಯನ್ನೇ ಕಾದಿರುವ
ನಿರ್ಮಲೆ

ಪತ್ರ ಮಡಿಕೆಮಾಡಿ ಬಾಲಕನ ಕೈಯಲ್ಲಿತ್ತು, ನನ್ನ ಕೆಲಸಕ್ಕೆ ಹೋಗಿಬಿಟ್ಟೆ. ಬಾಲಕನು ಇನ್ನೂ ಮಾಧವನಿರು ವಲ್ಲಿಗೆ ಮುಟ್ಟಿದನೋ ಇಲ್ಲವೋ, ಅಷ್ಟರಲ್ಲಿ ನನ್ನ ಮನಸ್ಸು ಉತ್ತರದ ದಾರಿ ನೋಡತೊಡಗಿತು. ಮಾಧವನ ಉತ್ತರ ವನ್ನು ಕಲ್ಪಿಸತೊಡಗಿತು. ಒಮ್ಮೆ ಅನಿಸುತ್ತಿತ್ತು— ತಾನು ಬರುವುದಾಗಿ ಮಾಧವನು ಉತ್ತರ ಬರೆಯುವನು ಹಾಗೂ ತಾನು ಬರುವ ದಿನ-ಹೊತ್ತು ನಿಶ್ಚಿತವಾಗಿ ತಿಳಿಸುವನು ! ಇನ್ನೊಮ್ಮೆ ಅನಿಸುತ್ತಿತ್ತು— ತುಂಬ ಕೆಲಸವಿದ್ದುದರಿಂದ ಬರಲು ಬಿಡುವಿಲ್ಲ ಎಂದು ತಿಳಿಸುವನು ! ಮನಸ್ಸು ಎಂತಹ ಅದ್ಭುತ ವಸ್ತುವಿದೆ ಯಾರು ಬಲ್ಲರು ? ಎಲ್ಲಿ ಬೇಕಲ್ಲಿ ಧಾವಿಸು ವುದು, ಏನು ಬೇಕಾದುದನ್ನು ಚಿತ್ರಿಸುವುದು, ತನ್ನ ಒಲವಿ ನಂತೆ ಮಾತನಾಡುವುದು, ಒಮ್ಮೆ ಧೈರ್ಯಕೊಡುವುದು, ಒಮ್ಮೆ ಹೆದರಿಕೆ ಹುಟ್ಟಿಸುವುದು. ಒಮ್ಮೆ ನಗಿಸುವುದು, ಒಮ್ಮೆ ಅಳಿಸುವುದು, ಒಮ್ಮೆ ಗೊಂದಲವೆಬ್ಬಿಸುವುದು. ಮನ ಸ್ಸಿನ ಬಣ್ಣ-ಬಿನ್ನಾಣವಾದರೂ ಎಂತಹುದು ! ಅದಕ್ಕೆ ಸ್ಥಿರತೆ ಯೆಂಬುದೇ ಗೊತ್ತಿಲ್ಲವೇನೋ ! ಈ ರೀತಿ ಮನಸ್ಸಿನ ಬಗ್ಗೆ ಯೋಚನೆಗಳನ್ನು ಮನಸ್ಸೇ ಮೆಲುಕು ಹಾಕುತ್ತಿರುವಾಗ ನಾನು ಅದರಲ್ಲಿಯೇ ಮಗ್ನಳಾಗಿಹೋದೆ.

ಮಾಧವನ ಉತ್ತರ ಬಂದಿತು: "ಜೊತ್ತು ತೀರಾ ಮರ್ಯಾದಿತ. ಮೊದಲೇ ಎಲ್ಲ ವ್ಯವಸ್ಥೆ ಮಾಡಿಡಬೇಕು. ನಾವು ಬರುವೆವು." ದಿನ ಹೊತ್ತು ನಿಶ್ಚಿತವಾಗಿ ತಿಳಿಸಿದ್ದ. ಮಾಧವನ ಉತ್ತರದಿಂದ ಅವನ ಸಮದೃಷ್ಟಿಯ ಪ್ರತ್ಯಕ್ಷ ಪ್ರಮಾಣ ಬಂದಂತಾಯಿತು ನನಗೆ. ಅವನಿಗೆ ಬರಲು ಇನ್ನೂ ಸಾಕಷ್ಟು ಸಮಯವಿದ್ದಿತು. ಅಷ್ಟರಲ್ಲಿ ಮನೆಯನ್ನು ತೊಳೆದ ಅಕ್ಕಿಯಂತೆ ಹಸನಾಗಿಡಬೇಕೆಂದು ಗೊತ್ತುಮಾಡಿದೆ.

ಅಂದು ಮಾಧವ ಬರುವ ದಿನ. ಮದುವೆಯ ಸಮಾರಂಭದಲ್ಲಿ ಮದುವಣಗಿತ್ತಿಯ ಕಡೆಯ ಜನರ ಧಾಂದಲೆಯಾಗುವಂತೆಯೇ—ಅದಕ್ಕಿಂತಲೂ ಹೆಚ್ಚು – ನನ್ನ ಗತಿಯಾಯಿತು. ಮನೆಯ ಮುಂದೆ ತಳಿ ಹಾಕಿದೆ. ತಲೆಬಾಗಿಲಿಗೆ, ಹೊಸ್ತಿಲಿಗೆ ಸಾರಣೆ-ಕಾರಣೆ ಮಾಡಿದೆ. ಬಾಳೆಗೊಂಚಲು ಸಹಿತ ಬಾಳೆಗಂಬ ಗಳನ್ನು ಎರಡೂ ಬದಿಗೆ ಕಟ್ಟಿದೆ. ಎಲ್ಲ ಕಡೆಗೂ ತಳಿರು ತೋರಣ ಹಚ್ಚಿದೆ. ಅಂಗಳದಲ್ಲಿ ಬಣ್ಣಬಣ್ಣಗಳ ರಂಗವಲ್ಲಿ ಹಾಕಿದೆ. ಹೂಮಾಲೆ ಕಟ್ಟಿಟ್ಟೆ. ಅಡಿಗೆ ಏನೇನು ಮಾಡಬೇಕು ಎಂಬ ಯೋಚನೆ ಮಾಡತೊಡಗಿದೆ ಅವನಿಗೆ ಸೇರುವ ತಿನಿಸುಣಿಸು ಯಾವುದು—ನನಗೆ ಕಲ್ಪನೆ ಬಾರದು. ಆದುದರಿಂದ ನಾನೊಂದು ವಿಚಾರ ಮಾಡಿದೆ. ತುಂಬಾ ಸಂಭ್ರಮದಿಂದ ತರತರದ ಅಡಿಗೆ ಮಾಡಿಡುವುದಾಗಿ ಗೊತ್ತುಮಾಡಿದೆ. ಅಷ್ಟು ಜಿನಸುಗಳಲ್ಲಿ ಅವನಿಗೂ ಅವನ ಜೊತೆಯಲ್ಲಿ ಬರುವವರಿಗೂ ಏನಾದರೂ ಸೇರಲೇಬೇಕಷ್ಟೇ ಎಂದೆನಿಸಿತು! ಪಂಚಪಕ್ವಾನ್ನಗಳನ್ನು ಮಾಡಿದೆ. ಐದು ಜಾತಿಯ ಅನ್ನ, ಐದು ಬಗೆಯ ಪಲ್ಯ, ಐದು ಚಟ್ನಿ, ಐದು ಕೋಸಂಬರಿ ತಯಾರಿಸಿಟ್ಟೆ. ಬೇರೆ ಬೇರೆ ತೆರದ ಸಂಡಿಗೆ-ಹಪ್ಪಳ ಕರಿದಿಟ್ಟೆ.

ಸೇವಿಗೆ– ಪಾಯಸ, ಪುರಿ ಮಾಡಿದೆ. ಬೇಸನಪುಂಡೆ ತಯಾರಿಸಿದೆ. ಮಾವು-ಲಿಂಬೆ-ಉತ್ತತ್ತಿ-ನೆಲ್ಲೀಕಾಯಿ-ಕವಳೀಕಾಯಿಗಳ ಉಪ್ಪಿನಕಾಯಿ ತೆಗೆದಿಟ್ಟೆ. ಕೇಶರ ಕಸ್ತೂರಿ ಸಹಿತ ತಾಂಬೂಲ ತಯಾರಿಸಿದೆ. ಚಂದನದ ಮಣೆ, ಬೆಳ್ಳಿಯ ತಟ್ಟೆ-ತಂಬಿಗೆ ಹಸನಾಗಿ ತೊಳೆದು ಒರಸಿಟ್ಟೆ. ಹುಬ್ಬುಗಳ ನಟ್ಟನಡುವೆ ಕುಂಕುಮತಿಲಕವನ್ನು ಹಚ್ಚಿದೆ ತೂಗಾಡುವ ಕರ್ಣಾಭರಣಗಳನ್ನು ಹಾಕಿಕೊಂಡೆ. ಮುತ್ತಿನ ಬಳೆಗಳನ್ನು ಕೈಯಲ್ಲೇರಿಸಿದೆ. ಐದು ಪದರಿನ ಮುತ್ತಿನ ಹಾರ ಕೊರಳಲ್ಲಿ ಧರಿಸಿದೆ. ಯಾವ ಬಣ್ಣದ ಸೀರೆಯುಟ್ಟರೆ ಹೆಚ್ಚು ಅಂದ ಕಾಣುವೆನು ಎಂಬ ಯೋಚನೆ ಮನಸ್ಸಿನಲ್ಲಿ ಬಂದುಹೋಯಿತು. ಆದರೆ ಯೋಚನೆ ಮಾಡಲು ಇಲ್ಲವೆ ಪ್ರಯೋಗ ಮಾಡಲು ಅವಕಾಶವೇ ಇರಲಿಲ್ಲ. ಜರಿಯ ಸೀರೆಗಳಲ್ಲಿ ತುಂಬಾ ಬೆಲೆ ಬಾಳುವುದನ್ನು, ಚಿತ್ರವಿಚಿತ್ರ ಕುಸುರಿನ ಜರತಾರಿಯ ಉತ್ತರೀಯವನ್ನು ಧರಿಸಿದೆ, ಹಾಗೂ ಮಾಧವನ ದಾರಿ ನೋಡುತ್ತ ಕುಳಿತೆ.

ಗೊತ್ತಾದ ಹೊತ್ತು ಮೀರಿಹೋಯಿತು. ಮಧ್ಯಾಹ್ನವಾಯಿತು, ಅಪರಾಹ್ನವಾಯಿತು, ಸಾಯಂಕಾಲವಾಯಿತು. ರಾತ್ರಿಯಾಯಿತಾದರೂ ಮಾಧವನ ಸುಳಿವೇ ಇಲ್ಲ. ಆದರೂ ನನ್ನ ಆಸೆಯು ಸಮೆಯೊಳಗಿನ ಬತ್ತಿಯಂತೆ ಉರಿಯುತ್ತಲೇ ಇತ್ತು. ಬಾಗಿಲ ಹೊರಗೆ ಹಣತೆ ಹಚ್ಚಿಟ್ಟೆ, ಅಂಗಣದಲ್ಲಿಯೂ ಇಟ್ಟೆ, ಪಡಸಾಲೆ ನಡುಮನೆ—ಒಂದೊಂದು ಮನೆಯ ಭಾಗದಲ್ಲಿಯೂ ಇಟ್ಟೆ. ಕ್ಷಣಹೊತ್ತು ವಿಶ್ರಾಂತಿ ತಕ್ಕೊಳ್ಳಬೇಕೆನಿಸಿ ಅಡ್ಡಾದೆ. ರಾತ್ರಿ ಕಳೆದಂತೆ ನನ್ನ ಆಸೆ ಹಣತೆಯೊಳಗಿನ ಜ್ಯೋತಿಯಂತೆ ಅತ್ತಿಂದಿತ್ತ ತೂಗಾಡತೊಡಗಿತು.

ಬಗೆಬಗೆಯ ಯೋಚನೆಗಳು ಬಂದುಹೋದವು. ಇನ್ನೊಬ್ಬರ ಆಶಾಭಂಗವನ್ನು ಮಾಡಬಾರದೆಂಬುದಿಷ್ಟಾದರೂ ಮಾಧವನಿಗೆ ತಿಳಿಯಬಾರದೇ ? ಒನ್ನೆ ಅಹುದೆಂದಮೇಲೆ ಮಾತು ನಡೆಯಿಸಬೇಕೆಂಬ ಸಾಮಾನ್ಯ ವ್ಯವಹಾರದ ನಿಯಮವನ್ನೂ ಮಾಧವನಿಗೆ ಪಾಲಿಸಲಾಗಬಾರದೇ ? ಇನ್ನು ನನ್ನಿಂದ ತಪ್ಪೇನಾದರೂ ಸಂಭವಿಸಿದೆಯೆನ್ನಬೇಕೆಂದರೆ, ಹಾಗೇನೂ ಆಗಿಲ್ಲ. ಅವನ ಸೂಚನೆಯ ಮೇರೆಗೆ, ಅದೇಕೆ ಅದಕ್ಕಿಂತ ಎಷ್ಟೋ ಪಟ್ಟು ಹೆಚ್ಚಿಗೆ ಸಿದ್ಧತೆ ಮಾಡಿಟ್ಟಿರುವೆ ! ಅವನ ಬಗ್ಗೆ ನಾನು ಕೇಳಿದ್ದೇನು, ಅವನು ಇದ್ದದ್ದೇನು ? ಇಲ್ಲದ್ದನ್ನು ಇದೆಯೆಂದೂ ಇದ್ದದ್ದನ್ನು ಇಲ್ಲವೆಂದೂ ಗಲಾಟೆಯೆಬ್ಬಿಸುವ ಜಗತ್ತಿನ ರೀತಿ ಎಷ್ಟು ವಿಲಕ್ಷಣ ! ಯಾರೊಬ್ಬರ ಗೌರವ ಮಾಡುವಾಗ, ಆ ವ್ಯಕ್ತಿಗೆ ಅದು ಬೇಡ ಬೇಡವೆನಿಸಿದರೂ ಅವನ ಬೆನ್ನುಹತ್ತಿ ಸಾಕುಬೇಕಾಗಿ ಮಾಡುವರು ! ಇದರ ಹೆಸರು ಜಗತ್ತು ! ಇಂತಹ ಹಲವು ಯೋಚನಾತರಂಗಗಳಲ್ಲಿ ಮುಳುಗೇಳುತ್ತಿರುವಾಗ ಕಣ್ಣಿಗೆ ಜಂಪು ಹತ್ತಿತು. ಬೆಳಗಾದೊಡನೆ ಎದ್ದು ಮತ್ತೆ ಕೆಲಸಬೊಗಸೆ ಮಾಡತೊಡಗಿದೆ.

ನಾನಿರುವ ಮನೆಯ ಕಟ್ಟೋಣ ತುಂಬಾ ಮನೋಹರವಾದುದು; ಎಲ್ಲ ಬಗೆಯ ಸುಖಸೌಕರ್ಯಗಳನ್ನು ಹಾಗೂ ಏರ್ಪಾಡುಗಳನ್ನುಳ್ಳುದು. ಹಳೆಯ ಕಾಲದಿಂದ ನಡೆದು ಬಂದ ಪದ್ಧತಿ ! ವಿಚಾರಪೂರ್ಣವಾದ ರಚನೆ ! ಎಲ್ಲವೂ ತನ್ನ ತನ್ನ ಜಾಗದಲ್ಲಿ ! ಒಳ್ಳೇ ಕೌತುಕಮಯವಾಗಿದ್ದಿತು ಈ ಕಟ್ಟಡ. ಒಳ್ಳೇ ವಾಸ್ತುಶಿಲ್ಪಿಯ ಬುದ್ಧಿಯೂ ಸ್ತಿಮಿತವಾಗುತ್ತಿತ್ತು ಇದರ ಕೌಶಲ್ಯ ನೋಡಿ.

ನನ್ನ ಕಟ್ಟಡವೆಂದಮೇಲೆ ಆದರ ಒಡೆತನದ ಹಕ್ಕು ನನ್ನ

ಕಡೆಗೇ ಇರಬೇಕಷ್ಟೇ ಹಾಗಿದ್ದರೂ ಒಡೆತನದ ಸುಖ ನನಗಿರಲಿಲ್ಲ. ಎಂದಿಗೂ ಶಾಂತತೆಯೆಂಬುದಿರಲಿಲ್ಲ; ಸ್ವಸ್ಥತೆಯಿರಲಿಲ್ಲ, ಸುಖಸಮಾಧಾನಗಳಿರಲಿಲ್ಲ ಉರಿಯುವ ಬಿಸಿಲಲ್ಲಿ ಕಲ್ಲಿನ ನೆಲದಮೇಲೆ ಕಾಲ್ಮರೆ ಇಲ್ಲದೆ, ತಲೆಯಮೇಲೆ ಕಟ್ಟಿಗೆ ಹೊರೆ ಹೊತ್ತುಕೊಂಡು, ತೀರದ ಪ್ರವಾಸ ಕೈಕೊಂಡವನಂತಿತ್ತು ನನ್ನ ಸ್ಥಿತಿ. ತನ್ನ ಮೈಮೇಲಿನ ಒಟ್ಟೆಯಮೇಲೆ ತನ್ನ ಒಲೆಯೊಳಗಿನ ಕೆಂಡ ತನ್ನ ಕೈಯಿಂದಲೇ ಬಿದ್ದು, ಆ ಬಟ್ಟೆ ಉರಿಯತೊಡಗಿದರೆ ಹೇಗಾಗಬೇಕೋ ಅಂತಾಗಿತ್ತು ನನಗೆ. ಆದರೆ ಈ ಬಗ್ಗೆ ದೋಷಿ ಯಾರು? ಇನ್ನಾರೂ ಇಲ್ಲ, ನಾನೇ ದೋಷಿಯಾಗಿದ್ದೆ. ನನ್ನ ಮನೆಯೊಳಗಿನ ಒಕ್ಕಲು ಇದ್ದವರಿಗೆ ನಾನು ಹೇಗೆ ದೋಷ ಕೊಡಲಿ? ಅವರ ಮೇಲೆ ಪೂರ್ಣ ವಿಶ್ವಾಸವಿಟ್ಟು ಅವರಿಗೆ ಮನಬಲ್ಲ ಅವಕಾಶ ಕೊಟ್ಟಿದ್ದೆ—ಅದರ ಫಲಭೋಗ ನಾನಿಂದು ಉಣ್ಣುತ್ತಿದ್ದೆ.

ಆ ಆರು ಜನರು ನನ್ನ ಮನೆಯಲ್ಲಿ ವಾಸಿಸುತ್ತಿದ್ದರು. ಮೊದಲು ಅವರು ಸೌಮ್ಯರೀತಿಯಲ್ಲಿ ನಡೆದುಕೊಳ್ಳುತ್ತಿದ್ದರು ಎಳೆಯ ಮಕ್ಕಳಂತೆ ಅವರಾಗ ನನಗೆ ತೋರುತ್ತಿದ್ದರು. ಆಗ ಹಾಗೆನಿಸಿದರೂ ಜಾಲಿಯ ಗಿಡ ಬೆಳೆದು ದೊಡ್ಡದಾದಂತೆಯೇ ಮುಂದೆ ಆಯಿತಲ್ಲಾ! ಜಾಲಿಯ ಗಿಡದ ಆಗಿಯು ಬೆಳೆದಂತೆ. ಮುಳ್ಳುಗಳನ್ನು ಮೈತುಂಬ ಪಸರಿಸಿಕೊಳ್ಳುವದಿಲ್ಲವೇ? ಬತ್ತಿಹೋದ ಕೆರೆಯಲ್ಲಿ ಮೀನು ತಳಮಳಿಸುವಂತಾಯಿತು ನನ್ನ ಸ್ಥಿತಿ. ನನ್ನ ಮನೆಯಲ್ಲಿ ಒಕ್ಕಲಿದ್ದ ಎಲ್ಲರೂ ಪ್ರಬಲರಾಗಿದ್ದರು ಅವರೆಲ್ಲ ಒಕ್ಕಟ್ಟಾಗಿ ನನ್ನನ್ನು ಒಬ್ಬಾಕಿಯನ್ನಾಗಿ ಮಾಡಿದ್ದರು ನಾನು ಮನೆಯೊಡತಿಯಾಗಿದ್ದರೂ ಆ ಪ್ರಬಲರ ಮುಂದೆ ನನ್ನ ಆಟ ಸಾಗದಾಗಿತ್ತು. ಮನೆಯ ಒಡೆತನ

ನನ್ನದು, ಅವರು ಮನೆಯೊಳಗಿನ ಒಕ್ಕಲು; ನಾನು ಅವರಿಂದ ಭಿನ್ನಳು ಎಂಬುದನ್ನು ಮರೆತುಬಿಟ್ಟು, ಅವರು ಆಡಿಸಿದಂತೆ ನಾನು ಆಡುತ್ತ ಹೊರಟೆ. ಅವರ ಕೈಯಾಟಿಗೆಯಾದೆ. ಅವರು ನನ್ನನ್ನು ಪರಿಪರಿ ಕಾಡುತ್ತಿದ್ದರು.

ಸುಖ-ಶಾಂತಿ-ಸಮಾಧಾನಗಳಿಂದ ತುಂಬಿ ತುಳುಕುತ್ತಿರುವ ಅದೆಷ್ಟೋ ಮನೆಗಳನ್ನು ನಾನು ನೋಡಿದ್ದೆ. ಆ ಮನೆಗಳು ಹಾಗೂ ನನ್ನ ಮನೆ ಇವುಗಳಲ್ಲಿಯ ಅಂತರ ನನಗೆ ಗೋಚರ ವಾಗತೊಡಗಿತು. ಆ ಎಲ್ಲ ಒಕ್ಕಲಿದ್ದ ಜನರನ್ನು ಹೊರಗೆ ಹಾಕುವುದಾಗಿ ತೀರ್ಮಾನಿಸಿದೆ. ಮನೆಯೊಡೆತನದ ಹಕ್ಕಿ ನಿಂದ ಅವರ ಕಡೆಗೆ ನೋಡತೊಡಗಿದೆ. ಅವರನ್ನು ಅಪಮಾನ ಗೊಳಿಸಲು ತೊಡಗಿದೆ. ಅವರ ಬಗ್ಗೆ ತುಚ್ಛತೆ ತೋರಿಸಿದೆ ಅವರ ವರ್ಚಸ್ಸು ನನ್ನ ಮೇಲೆ ಬೀಳದಂತೆ ಕೌಶಲ್ಯದಿಂದ ಇರ ತೊಡಗಿದೆ. ಹೀಗೆ ನಾನು ನಡೆಯುವುದರ ಪರಿಣಾಮವು ತುಂಬಾ ಶುಭವಾಯಿತು. ಒಂದು ದಿನ ಅವರಲ್ಲಿಬ್ಬರು ನನಗೆ ಹೇಳದೆಯೆ ಗಪ್ಪುಚಿಪ್ಪಾಗಿ ಹೊರಟುಹೋದರು. ಅವರು ಇರುವ ಜಾಗ ತೆರವಾಯಿತು. ಎದೆಯ ಮೇಲಿನ ದೊಡ್ಡ ಕಲ್ಲು ಬಡಿಗಾದಂತೆ ನನಗೆನಿಸಿತು. ಉಸುರುಗಟ್ಟಿಸುವ ಕತ್ತಲುಕೋಣೆಯೊಳಗಿಂದ ಹೊರಬಿದ್ದು ಬಯಲುಹವೆಯಲ್ಲಿ ಬಂದಾಗ ಹಾಯೆನಿಸುವಂತೆ ಎನಿಸಿತು. ಜನ್ಮವೆಲ್ಲ ಈ ದುಷ್ಟರ ಸಂಗತಿಯಿಂದ ಸಮಾಧಾನವೆಂದರೇನೆಂಬುದನ್ನು ಅರಿ ತಿದ್ದಿಲ್ಲ. ಈ ಪೀಡೆಗಳೆಲ್ಲ ತೊಲಗಲಿ ಎಂದು ಅನಿಸಿ ಅನಿಸಿ ಹೋಗಿತ್ತು, ಆದರೆ ಆ ಪ್ರಬಲ ರಾಕ್ಷಸರು ಕಾಡದೆ ಹೋದರೆ ತಾನೇ ! ಹೆರರ ಜೀವನ ಹಾಳುಮಾಡಿ ಹತ್ತೀಬಿತ್ತುವುದೇ ಅವರ ಮೆಚ್ಚಿನಾಟ !

ಕೆಲದಿನಗಳು ಕಳೆದವು ಆಗ ಮೂರನೆಯವನು ಒಂದೇ ಸವನೆ ನನ್ನ ಬೆನ್ನು ಹತ್ತಿ ಏನೇನೋ ಹೇಳತೊಡಗಿದನು. ಅವನು ಲೋಭದ ಮೂರ್ತಿ! ಹಣದೊಳಗಿನ ಹುಳು! ದುಡ್ಡಿನ ಹೊರತು ಅವನ ಕಣ್ಣಿಗೆ ಏನೂ ಬೀಳುತ್ತಿರಲಿಲ್ಲ. ಹೇಗೂ, ಎಲ್ಲಿಂದಲಾದರೂ, ಯಾವ ಹೊತ್ತಿನಲ್ಲಾದರೂ ಹಣ ಸಂಪಾದಿಸಬೇಕು ಎಂಬುದು ಅವನ ತತ್ವವಾಕ್ಯವು. ಹಣ ಗಳಿಸುವ ಧರ್ಮವೊಂದೇ ಅವನಿಗೆ ಗೊತ್ತು. ಈ ಧರ್ಮದ ಮುಂದೆ ಉಳಿದ ಧರ್ಮಗಳೆಲ್ಲ ಅವನಿಗೆ ತುಚ್ಛವಾಗಿ ತೋರುತ್ತಿದ್ದವು. ಎಲ್ಲಿಯಾದರೂ ಹಣವಿದ್ದಿದ್ದರೆ ಅದನ್ನು ಹೇಗಾದರೂ ಪಡೆದೇ ತೀರಬೇಕೆಂಬುದು ಅವನ ಉಪದೇಶ. ಅವನು ಆಗಾಗ ನನಗೆ ಹೇಳುತ್ತಿದ್ದ— "ಹಣ ದೊರಕಿಸಲು ಸಿಂಹನಂತೆ ಜಿಗಿಯಬೇಕು, ಇಲ್ಲವೆ ಇಲಿಯಂತಾದರೂ ಆಗಬೇಕು, ಎಂತೂ ಮಾಡಿ ದುಡ್ಡು ದೊರಕಿಸಿರಿ, ಕೂಡಿಡಿರಿ! ಬೇಕಾದರೆ ಹಗಲುಹಾಡೇ ದರೋಡೆ ಮಾಡಿರಿ, ಇಲ್ಲವೆ ಯಾರಿಗೂ ಗೊತ್ತಾಗದ ರೀತಿಯಲ್ಲಿ, ಯಾರಿಗೂ ಹೇಳದೆ ಕೇಳದೆ ಜೇಬು ತುಂಬಿಕೊಳ್ಳಿರಿ. ಧನಸಂಪಾದನೆಯ ಮಾರ್ಗ ಒಳಿತೋ ಕೆಡಕೋ ಯೋಚನೆ ಮಾಡಬೇಡಿರಿ ಮನುಷ್ಯನ ಧರ್ಮ ಅಳಿಯಬಹುದು, ಉಳಿಯಬಹುದು; ಅವನು ಗಳಿಸಿದ ಹಣ ಧರ್ಮ-ಅಧರ್ಮಗಳೊಂದಿಗೆ ಹೋಗುವುದಿಲ್ಲ ತಾನೇ?" ಇದು ಅವನ ಪ್ರಾಮಾಣಿಕ ಮತವಾಗಿತ್ತು; ಹಾಗೆಯೇ ಅತ ತಾನು ನಡೆದು ಎಲ್ಲರಿಗೂ ಹೇಳುತ್ತಿದ್ದನು.

ಅವನು ಮಾತನಾಡುವುದನ್ನು ನಾನು ಕೇಳುತ್ತಿದ್ದೆನು. ಆದರೆ ಅದು ನನ್ನ ಮನಸ್ಸಿಗೆ ಒಪ್ಪಿಗೆಯಾಗುತ್ತಿರಲಿಲ್ಲ. ಕೆರವು ಬಿದ್ದ ಜಾಗೆಯ ಮೇಲೆ ಅವನ ಕಣ್ಣಿತ್ತು, ಆದರೆ ನಾನು

ಅವನಿಗೆ ಸ್ಪಷ್ಟವಾಗಿ ತಿಳಿಸಿಬಿಟ್ಟೆ—ಆ ಜಾಗೆ ಯಾರಿಗೂ ಕೆಡುವುದಿಲ್ಲವೆಂದು. ಅವನು ಲೋಭಿಯಿದ್ದಂತೆ ಮಾನವಂತನೂ ಇದ್ದನು. ಒಂದು ದಿನ ತನ್ನ ಜೊತೆಗಾರನೊಬ್ಬನೊಡನೆ ಹೊರಟುಹೋದನು.

ಐದನೆಯವನು ಮದ್ದಾನೆಯಂತಿದ್ದನು. ಅವನಿಗೆ ಯಾತರದೂ, ಯಾರದೂ ಎಗ್ಗಿರಲಿಲ್ಲ. ಹೆಂಡ ಕುಡಿದು ತಲೆಗೇರಿದವನಂತೆ ನಡೆಯುತ್ತಿದ್ದ. ತಾನು ಮಾಡುವುದು, ಆಡುವುದು, ನಡೆಯುವುದು ಏನು—ಎಂತು, ಅದರ ಪರಿಣಾಮವೇನಾಗಬಹುದು ಎಂಬುದರ ಪರಿವೆಯೇ ಅವನಿಗಿರಲಿಲ್ಲ. ಸಮಕ್ಷಮದಲ್ಲಿ ಅವನ ನಿಂದೆ ಮಾಡಿದರೂ ಅವನಿಗೇನೂ ಅನಿಸುತ್ತಿರಲಿಲ್ಲ, ಅದೇಕೆ, ಅವನು ನಿರ್ಲಜ್ಜತನದಿಂದ ನಗುತ್ತಲೇ ಇರುತ್ತಿದ್ದ.

ಕುಸಿದು ಬೀಳುತ್ತಿದ್ದ ಕಟ್ಟಡ ದೊಪ್ಪನೆ ಕಡಿಮೆ ಬೀಳತೊಡಗಿದಂತೆ ಈ ಒಕ್ಕಲಿದ್ದವರ ಗತಿಯಾಗಿತ್ತು. ಅವರ ಕಸುವು ಕಡಿಮೆಯಾಗಿತ್ತು. ಒಬ್ಬರ ಹಿಂದೊಬ್ಬರು ನಾಲ್ವರು ಹೊರಟುಹೋಗಿದ್ದರು. ಇನ್ನುಳಿದವರು ಇಬ್ಬರು. ಐದನೆಯವನ ಮತ್ತಸ್ಥಿತಿ ನೋಡಿ, ಅವನಿಗೆ ಬಿರುನುಡಿಯಾಡಿ, ಧಿಕ್ಕಾರಮಾಡಿದೆ; ನಿರ್ಭರ್ತ್ಸನೆಯಿಂದ ನೋಡತೊಡಗಿದೆ. ದರಿದ್ರನಿಗೆ ಅಹಂಕಾರ ಹೆಚ್ಚೆನ್ನುವರು. ಆ ಮದೋನ್ಮತ್ತನು ಮನಸ್ಸಿನಲ್ಲಿಯೇ ಉರಿಯತೊಡಗಿದನು; ಒಂದುದಿನ ಸಿಟ್ಟಿನಿಂದ ಕಾಲು ಅಪ್ಪಳಿಸುತ್ತ ಅವನೂ ಹೊರಟುಹೋದನು.

ಇನ್ನುಳಿದ ಆರನೆಯವ. ಅವನು ಮತ್ಸರದಿಂದ ತುಂಬಿ ತುಳುಕುತ್ತಿದ್ದನು. ಹೊಟ್ಟೆಯಲ್ಲಿ ಉರಿಉರಿ ಉರಿಯುತ್ತಿದ್ದನು. ಯಾರೊಬ್ಬರ ಸ್ವರರೂಪ ನೋಡಿದರೂ ಗುಣ

ಗೌರವಕೇಳಿದರೂ ಅವನಿಗೆ ಹಿಡಿಸಲಾರದಷ್ಟು ಹೊಟ್ಟೆಕಿಚ್ಚು. ಯಾರೊಬ್ಬರ ಪ್ರಗತಿಯಾಗುವುದನ್ನು ಕಂಡರೆ, ಅಡ್ಡಗಾಲು ಹಾಕಲು ಹೊಂಚುಮಾಡುವನು. ಯಾರೊಬ್ಬರನ್ನು ತಪ್ಪು ದಾರಿಗೆ ಹಚ್ಚುವುದರಲ್ಲಿ, ಸುಳ್ಳಾಡಿ ಮೋಸಗೊಳಿಸುವುದರಲ್ಲಿ, ಅವನಿಗೆ ಸಂತೋಷ. ಅವನ ಕೃತಿಗಳಿಗೆಲ್ಲ ಮತ್ಸರವೇ ಸ್ಫೂರ್ತಿ; ಅದರಲ್ಲವನಿಗೆ ಅಸೂರೀ ಆನಂದ. ಅವನೀ ಹೀನವರ್ತನೆ ಯನ್ನು ನೋಡಿ ನಾನು ಸಂತಾಪದಿಂದ ಕೆಂಡವಾದೆ. ಸಿಕ್ಕಾಬಟ್ಟೆ ಒದರಾಡಿ ಹೇಳಿದೆ—"ಮುರ್ಖಾ! ನೀನು ದುಷ್ಟನಿದ್ದು ಇನ್ನೊಬ್ಬರ ಅಹಿತ ಮಾಡುತ್ತಿರುವೆ. ಹೆರರ ದಾರಿಯಲ್ಲಿ ಮುಳ್ಳು ಎರಚುವೆ, ಅವು ಇಂದಿಲ್ಲ ನಾಳೆ ನಿನಗೇ ಚುಚ್ಚುವವು—ಎಚ್ಚರಿಕೆ! ನನ್ನ ಆಶ್ರಯಕ್ಕೆ ಬಂದು, ಇಷ್ಟು ಸೊಕ್ಕು ನಿನಗೆ! ಇಲ್ಲಿಯು ಒಡೆತನ ನನ್ನದು! ತೊಲಗಿಲ್ಲಿಂದ!" ಅವನಿಗೆ ತಿಳಿದುಬಂದಿತು—ತನ್ನದೇನೂ ನಡೆಯುವುದಿಲ್ಲ ವೆಂದು. ಒಂದು ದಿನ ಅವನೂ ಹೊರಟುಹೋದನು. ಹೋಗು ವಾಗ ಹಿಂದಿರುಗಿ ನೋಡಲಿಲ್ಲ ಕೂಡ!

ಈ ಆರು ಜನ ಒಕ್ಕಲಿದ್ದವರು ಅವಿಚಾರದ ಮೊಟ್ಟೆಯಂತಿ ದ್ದರು ಕಾಣಲು ಭಯಂಕರರು—ಆದರೆ ಅದೆಲ್ಲ ತೋರಿಕೆ ಯಲ್ಲಿಯೇ! ಅವರನ್ನು ಕೆರಳಿದ ಕಣ್ಣುಗಳಿಂದ ಎದುರಿಸಿ ತಿರಸ್ಕಾರದಿಂದ ನೋಡಿದರೆ ಅವರರ್ಧ ಶಕ್ತಿ ಕರಗಿಹೋಗು ತ್ತಿತ್ತು. ಕೆಟ್ಟುದು ಎಂಥಾದರೂ ಕಸುವುಳ್ಳದ್ದಾದೀತೇ?

ಮನೆಯೊಳಗಿನ ಆರೂ ಜನ ಒಕ್ಕಲು ಹೊರಟುಹೋದರು. ರಾಡಿನಸುವೂ ಇರದ ತಿಳಿನೀರಿನಂತೆ ನನಗೆನಿಸಿತು. ಬಕುಲದ ಗಿಡಕ್ಕೆ ಜೋಕಾಲಿ ಕಟ್ಟಿ ಜೀಕುವಾಗ ಆಗುವ ಆನಂದವು ನನಗೆನಿಸಿತು. ಈ ಸುಖಾನುಭವದಲ್ಲಿ ದಿನಗಳು ಉರುಳು

ತ್ತಿರುವಾಗ, ಆಕಸ್ಮಿಕವಾಗಿ ಒಬ್ಬ ಬಾಲಕನು ಬಂದು ಮಾಧವನ ಪತ್ರವನ್ನು ತಂದುಕೊಟ್ಟನು. ಪತ್ರ ಓದಿ ಮುಗಿಸುವಷ್ಟರಲ್ಲಿ ಮಾಧವನು ತನ್ನ ಮಿತ್ರಪರಿವಾರದೊಂದಿಗೆ ಮನೆಯಲ್ಲಿ ಪ್ರವೇಶಿಸಿಯೇಬಿಟ್ಟನು! ನನಗೆ ವಿಚಾರ ಮಾಡಲು ಇಲ್ಲವೆ ಸಾಧನಸಾಮಗ್ರಿಗಳನ್ನು ನೇರ್ಪಡಿಸಲು ಸಮಯ ಕೂಡ ಇರಲಿಲ್ಲ. ನೆಲದ ಮೇಲೆ ಹಾಸಿದ ಕಂಬಳಿಯ ಮೇಲೆ ಮಾಧವನೂ ಅವನ ಪರಿವಾರದವರೂ ಕುಳಿತರು ನನ್ನ ಮೈಮೇಲೆ ಹಳತು ಬಟ್ಟೆ, ಕೂದಲು ಬೆನ್ನಮೇಲೆ ಇಳಿಬಿದ್ದಿದ್ದವು. ನನಗೆ ಆಶ್ಚರ್ಯವೆನಿಸಿತು. ಮಾಧವನ ಲಕ್ಷ್ಯದಲ್ಲಿ ಈ ಮಾತು ಬಂದಿತು. ಅವನೆಂದ— "ನಿರ್ಮಲೆ! ಆಶ್ಚರ್ಯವೆನಿಸಲು ಕಾರಣವಿಲ್ಲ. ನಿನ್ನ ವೈಭವ, ನಿನ್ನ ರೂಪ, ನಿನ್ನ ಬೆಡಗು-ಬಿನ್ನಾಣ ನೋಡಲು ನಾನಿಲ್ಲಿ ಬಂದಿಲ್ಲ. ನಿನ್ನ ನಿರ್ಮಲ ಚಿತ್ತವನ್ನು, ನಿನ್ನ ನಿಷ್ಪಾಪತೆಯನ್ನು ನೋಡಿ ನಾನಿಲ್ಲಿ ಬಂದುದು, ಹಾಗೂ ಇವರನ್ನೆಲ್ಲ ಕರೆತಂದುದು!"

ಮಾಧವನು ಮುಂದರಿದನು— "ತುಂಬಾ ಹಸಿವಾಗಿದೆ; ಸಿದ್ಧವಿದ್ದುದನ್ನು ಬಡಿಸು. ಆಮೇಲೆ ಮಾತನಾಡುವಾ!" ನನಗೆ ತುಂಬಾ ದಿಗಿಲು. ಮನೆಯಲ್ಲಿ ಏನೂ ಸಿಲ್ಕಿರಲಿಲ್ಲ. ಹಾಲನ್ನು ಕೂಡ ಇನ್ನೂ ತಂದಿರಲಿಲ್ಲ. ನನ್ನ ಮನದೊಳಗಿನ ಚಳಬಳ ನೋಡಿ ಮಾಧವನೆಂದನು—"ನಿನ್ನಿನದು ಏನಾದರೂ ಉಳಿದಿದೆಯೇ?" ನಾನು ಕಣ್ಣಿನಿಂದಲೇ ಅಹುದೆಂದು ಸೂಚಿಸಿದೆ. ಮುನ್ನಾದಿನದ ಎರಡುಮೂರು ರೊಟ್ಟಿ ಉಳಿದಿದ್ದವು. ಮಾಧವನು ಎಲ್ಲರಿಗೂ ತುಸು ತುಸು ಕೊಟ್ಟನು. ಅದರ ಮೇಲೆ ನಾನು ಮೆಣಸಿನಕಾಯಿಯ ಚಟ್ನಿಯಿಟ್ಟು, ಮನೆಯಲ್ಲಿದ್ದ ತುಸು ಮೊಸರು ಹಾಕಿದೆನು. ಮಾಧವನು ಬಾಯಿ

ಚಪ್ಪರಿಸುತ್ತ ರೊಟ್ಟಿ ತಿಂದು, ಹೊಟ್ಟೆ ತುಂಬ ನೀರುಕುಡಿದು ತೃಪ್ತಿಯಿಂದ ತೇಗಿದನು.

ನಸುನಗುತ್ತ ನಾನೆಂದೆ— "ಮಾಧವಾ ! ಹಿಂದಿನ ನಿನ್ನ ಪತ್ರ ಬಂದಾಗ ನಾನು ತುಂಬಾ ಸಿದ್ಧತೆ ಮಾಡಿಟ್ಟಿದ್ದೆ. ರಾಜನ ಮೇಜವಾನಿಯನ್ನೂ ಮೀರಿಸುವ ಅಡಿಗೆ ಮಾಡಿದ್ದೆ...." ನನ್ನ ಮಾತು ಮುಗಿಯುವ ಮೊದಲೇ ಮಾಧವನೆಂದನು—"ಹೌದು, ಸಿಹಿ ಸಿಹಿ ಅಡಿಗೆ ಮಾಡಿಟ್ಟಿದ್ದೆ, ಪಕ್ವಾನ್ನಗಳನ್ನು ತಯಾರಿಸಿದ್ದೆ, ರಂಗೋಲಿ ಹಾಕಿದ್ದೆ, ಸಿರಿಗಂಧದ ಮಣೆ ಹಾಕಿದ್ದೆ, ಬೆಳ್ಳಿಯ ತಟ್ಟೆ-ಬಟ್ಟಲಿಟ್ಟಿದ್ದೆ ! ಬಗೆಬಗೆಯ ಉಡಿಗೆ-ತೊಡಿಗೆ ತೊಟ್ಟು ಸಿಂಗಾರವಾಗಿದೆ ! ಈ ಹೊರಗಿನ ಥಳಕುಬೆಳಕು ಕಣ್ಣನು ಕುಕ್ಕಿಸಬಹುದು; ಆದರೆ ಕಣ್ಣಿಗೆ ಚೆನ್ನಾದುದರಲ್ಲಿಯೇ ಸರ್ವ ಸುಖವು ಒಟ್ಟಿಲ್ಲ ತಾನೇ ! ಕಲಹದಿಂದ ಜರ್ಜರವಾದ ಮನೆಯ ಗೋಡೆಗಳಿಗೆ ಕಣ್ಮರುಳು ಮಾಡುವ ಬಣ್ಣ ಹಚ್ಚಿದಂತೆಯೇ ನಿನ್ನೆಲ್ಲ ತಯಾರಿ ಇತ್ತು. ರೋಗದಿಂದ ಕೊಳೆತು ಹೋದ ಮೈಯಮೇಲೆ ರೇಷ್ಮೆಯ ವಸ್ತ್ರಧಾರಣ ಮಾಡಿದಂತಿತ್ತು ನಿನ್ನ ಇರವು." ನಾನು ನಡುವೆಯೇ ಬಾಯಿ ಹಾಕಿದೆ— "ಹಾಗಲ್ಲ ಮಾಧವಾ ! ಇಂದೇನೂ ತಯಾರಿ ಇಲ್ಲದಾಗ ಆಕಸ್ಮಿಕವಾಗಿ ಬಂದುಬಿಟ್ಟೆ ! ನಿನಗೆ ಅರ್ಪಿಸಲು ಒಂದು ಹೂವೂ ಇಲ್ಲ ನನ್ನ ಬಳಿ !" ನನ್ನನ್ನು ನಡುವೆಯೇ ನಿಲ್ಲಿಸಿ ಮಾಧವನೆಂದನು—"ನಿನ್ನಿಂದ ಏನನ್ನಾದರೂ ತಕ್ಕೊಳ್ಳಲೆಂದು ನಾನಿಲ್ಲಿ ಬಂದಿರುವೆನೇ ? ನಿನಗೆ ಕೊಡಲು ಬಂದಿರುವೆನು. ತಕ್ಕೊಳ್ಳುವುದೇ ಇದ್ದಲ್ಲಿ ನಾನು ತುಸುವಾದರೂ ತಡಮಾಡಬಹುದಾಗಿತ್ತು, ಆದರೆ ತೀರ ತ್ವರೆಯಿಂದ ನಾನೀಗ ಬಂದುದು ನಿನಗೆ ಕೊಡಲು ! ಕೊಡುವುದರಲ್ಲಿ ಆನಂದವಿದೆಯೋ, ಕೊಳ್ಳು

ವುದರಲ್ಲಿ ಆನಂದವಿದೆಯೋ—ನೀನೇ ಹೇಳು !"

"ಇದು ನೋಡು" ಎನ್ನುತ್ತ ಮಾಧವನು ತನ್ನ ಮಾತು ಮುಂದುವರಿಸಿದನು— "ದೇವರು ನಿರ್ಮಿಸಿದುದನ್ನು ಇದ್ದಕ್ಕಿದ್ದಂತೆ ಮರಳಿಕೊಟ್ಟರೆ ಅದರಿಂದೇನೂ ಲಾಭವಿಲ್ಲ." ತತ್‌ಕ್ಷಣ ನಾನೆಂದೆನು— "ಎಲ್ಲವನ್ನೂ ದೇವರೇ ಮಾಡಿಲ್ಲವೇ ? ಅಂದ ಮೇಲೆ ನಾವೇನನ್ನೂ ಕೊಳ್ಳಬಾರದು, ಏನನ್ನೂ ಕೊಡ ಬಾರದು ಎಂದಾಯಿತು !" ಮಾಧವನು ನಸುನಗುತ್ತ ಉತ್ತರಿಸಿದನು— "ದೇವರು ನಿರ್ಮಿಸಿದುದರಲ್ಲಿ ತಮ್ಮ ಪ್ರೇಮ ಭಾವನೆ ಹಾಗೂ ಪ್ರಯತ್ನಗಳನ್ನು ಬೆರಸಿ, ಇದ್ದುದನ್ನು ಹೆಚ್ಚು ಅಂದಗೊಳಿಸಿ ದೇವರಿಗೆ ಕೊಟ್ಟರೆ, ಆತನು ಹಿರಿಹಿರಿ ಹಿಗ್ಗುವನು. ಹೂಗಳನ್ನು ದಾರದಲ್ಲಿ ಸೂಜಿಯಿಂದ ಹೆಣೆದು ಹಾರ ಮಾಡಿ, ಇಷ್ಟದೈವತಕ್ಕೆ ನೀನು ಹಾಕುವಿಯಲ್ಲವೇ ? ಬರೀ ಹೂಗಳಲ್ಲಿ ನೀನು ಏನೇನು ಬೆರಸಿದೆ ನೀನೇ ನೋಡು. ಹೂ ಏರಿಸುವುದಕ್ಕಿಂತ ಮಾಲೆಮಾಡಿ ಹಾಕುವುದರಿಂದ ನಿನ್ನ ಆನಂದ ಇಮ್ಮಡಿಸುವುದೇಕೆ ? ಅದಿರಲಿ, ನನಗಾಗಿ ಇಷ್ಟು ರುಚಿರುಚಿಯಾದ ಅಡಿಗೆ ಮಾಡಿಡಲು ಕಾರಣವೇನು ? ಪೇಟೆಯಲ್ಲಿಯ ಪದಾರ್ಥಗಳನ್ನು ತಂದು ಇದ್ದಕ್ಕಿದ್ದಂತೆ ಏಕೆ ಇರಿಸಲಿಲ್ಲ ? ತಿಳಿಯದೆ ಮಾಡುವುದನ್ನೇ ತಿಳಿದು ಮಾಡುವುದು— ಎಂದರೆ ಜ್ಞಾನವು ನಾನೀಗ ಬಂದಂತೆ ತಾನಾಗಿ ಮನೆಯಲ್ಲಿ ಪ್ರವೇಶ ಮಾಡುವುದು....

"ಅದೀಗ ಇರಲಿ. ನಾನು ಬರುವ ಉದ್ದೇಶ ನಿನಗೆ ತಿಳಿಯಿತು ತಾನೇ ! ಆ ಆರು ಜನರು ಕಾಡುತ್ತ ತಳವೂರಿರುವವರೆಗೆ ಶಾಂತಿದೇವತೆಯು ಮನೆಯಲ್ಲಿ ಕಾಲಿಡುವಳೆಂತು ? ಅವಳು ಒಲ್ಲೆ ಒಲ್ಲೆ ಎಂದಳು. ಪ್ರೇಮದೇವನೂ ಬರಲು

ಸಿದ್ಧನಿರಲಿಲ್ಲ. ಸುಖ-ಸಮಾಧಾನ-ಸಂತೋಷಗಳಂತೂ ಅಡಗಿ ಕುಳಿತವು. ಜಯ-ವಿಜಯರಂತೂ ಬೆನ್ನು ತಿರುವಿಬಿಟ್ಟರು. ಅವೇ‍ಲೇನು ಮಾಡುವುದು ? ನಿನಗೆ ಬರುತ್ತೇನೆಂದು ಹೇಳಿಯೂ ನಿಲ್ಲಿಸಿಬಿಡಬೇಕಾಯಿತು. ಮನೆಯೊಳಗಿನ ದುರು ಳರು ಈಗತೆರಳಿರುವರು. ಈಗ ಆ ಜಾಗೆ ತೆರವಾಗಿದೆ. ಅಲ್ಲಿ ಈ ನನ್ನ ಪರಿವಾರದವರೆಲ್ಲರೂ ಬಂದು ಇರುವರು. ಇದನ್ನು ಕೊಡಲೆಂದೇ ನಾನು ತುಂಬಾ ಅವಸರದಿಂದ ಬಂದಿರುವೆನು. ಆ ಸೊಕ್ಕಿದ ಒಕ್ಕಲಿನವರನ್ನು ಹೊರದೂಡುವುದರಲ್ಲಿ ನೀನು ತೋರಿಸಿದ ಧೈರ್ಯ-ಪ್ರಯತ್ನಗಳಿಗೆ ಇಗೊ ಇದು ನನ್ನ ದಿವ್ಯ ಪಾರಿತೋಷಿಕ !"

ದೊಡ್ಡಗಾಳಿ ಬಂದು ಮನೆಯನ್ನೆಲ್ಲ ತುಂಬುವಂತೆ ಮಾಧವನ ಪರಿವಾರದವರು ಮನೆಯನ್ನು ತುಂಬಿದರು. ಈವರೆಗೆ ಮಾಧವನ ಸ್ವರೂಪ, ಔದಾರ್ಯ, ದಯೆ, ಕೇಳಿದ್ದೆನು, ಅದು ಅತ್ಯಲ್ಪವಾಗಿದೆ, ಅತಿ ಅಪೂರ್ಣವಾಗಿದೆಯೆಂದು ಜಗತ್ತಿಗೆ ಉಚ್ಚಧ್ವನಿಯಿಂದ ಸಾರಿ ಸಾರಿ ಹೇಳಬೇಕೆಂದು ಅನಿಸಿತು.

ಕೆಡಕು ಹೋಗದೆ ಒಳಿತು ಬರದು ಎಂಬ ಅನಾದಿಕಾಲದಿಂದ ನಡೆದುಬಂದ ಕಾನೂನನ್ನು ಮಾಧವನು ಮರಳಿ ಪ್ರಸ್ಥಾಪಿಸಿದನು. ಅನಿಷ್ಟವು ಹೋಗಿ, ಅದರ ತಾಣದಲ್ಲಿ ಇಷ್ಟವು ಬಂದಿತು. ದುರುಳುತನ ಹೋಗಿ, ದಿವ್ಯತನ ಬಂದಿತು. ನನ್ನ ಮನೆಯೊಡೆತನದ ಹಕ್ಕು ಹೋಗಿ, ಮಾಧವನು ಮನೆಯೊಡೆಯನಾದನು.

# ಜೀವನ ವರ್ತುಲ

ಧೀರ ಗಂಭೀರ ಸಾಗರವಲ್ಲಿಯ ಚಂಚಲ ತರಂಗಗಳು ಸಮೀರನು ಒಯ್ಯುತ್ತ ಧಾವಿಸುತ್ತಿದ್ದವು. ಸಮೀರನ ಗೆಳೆತನ ವಾದಂದಿನಿಂದಲೂ ತರಂಗಗಳಿಗೆ ಅವನೊಡನೆ ವಿಹರಿಸುವ ಅಭ್ಯಾಸವೇ ಉಂಟಾಗಿತ್ತು. ಸಮೀರನ ಗೆಳೆತನವು ಅವುಗಳಿಗೆ ಜೇನಿಗಿಂತ ಸವಿಯೆನಿಸತೊಡಗಿತು. ಸವಿ ತಿನಸುಗಳನ್ನು ತರುವ ಬೀಗರು ಮಕ್ಕಳಿಗೆ ಎಂತು ಪ್ರಿಯರಾಗಿರುವರೋ ಅವಕ್ಕಿಂತಲೂ ಹೆಚ್ಚಾಗಿ ಸಮೀರನು ತರಂಗಗಳಿಗೆ ಪ್ರಿಯನಾಗಿದ್ದನು. ಸಕಲ ಜಗತ್ತನ್ನು ಸುತ್ತಾಡಿ ಬರುವ ಸಮೀರನು ಧೈರ್ಯಶಾಲಿಯೂ ವಾಕ್ಪಟುವೂ ಚತುರನೂ ಆಗಿದ್ದನು. ಸದ್ದಿಲ್ಲದೆ ಅಲೆದಾಡುವುದು ಅವನಿಗೆ ಅರಿಯದ ಮಾತಾಗಿತ್ತು. ತ್ರೈಲೋಕ್ಯದ ಸಂಗತಿಗಳನ್ನು ಆತನು ತರಂಗಗಳಿಗೆ ಹೇಳುತ್ತಿದ್ದನು. ಸಮೀರನ ನಿವಾಸಸ್ಥಾನಕ್ಕೆ ಮಿತಿ-ಮರ್ಯಾದೆಗಳು ಇರದಿರುವಂತೆಯೇ ಅವನ ಮಾತುಗಳಿಗೂ ಕೊನೆಯಿರಲಿಲ್ಲ. ಅವನ ಶಕ್ತಿಯೂ ಪ್ರಚಂಡವಿರುವಂತೆಯೇ ಅವರ ಕಲ್ಪನಾಶಕ್ತಿಯೂ ಆಶ್ಚರ್ಯಕರವಾಗಿತ್ತು! ಆಕಾಶವನ್ನು ಭೇದಿಸಿ ಆಚೆಗೆ ಅದು ಹಾರುತ್ತಿದ್ದಿತು!

ಅಪ್ರಬುದ್ಧ ತರಂಗಗಳಿಗೆ—ಪಾಪ! — ಸಮೀರನ ಮಾತುಗಳೆಲ್ಲ ನಿಜವೆನಿಸಿ, ಅವು ತಮ್ಮ ಮಾನಸದ ದಿನಚರಿಯಲ್ಲಿ ಅವನ್ನೆಲ್ಲ ಟಿಪ್ಪಣಿ ಮಾಡಿಟ್ಟುಕೊಳ್ಳುತ್ತಿದ್ದವು. ಸಮೀರನು ಚಿತ್ರಿಸಿದ ಕಲ್ಪನಾಚಿತ್ರಗಳೆಲ್ಲ ತರಂಗಗಳಲ್ಲಿ ಕ್ಯಾಮೆರಾದೊಳಗಿನ ಛಾಯಾಚಿತ್ರಗಳಂತೆ ಮೂಡುತ್ತಿದ್ದವು. ಮನಸೆಳೆಯುವ ಸೌಂದರ್ಯವು ಸ್ಮೃತಿಪಟಲದೊಳಗೆ ಅಳಿಸದೆ ಉಳಿಯುವಂತೆ ತರಂಗಗಳಲ್ಲಿ ಮೂಡಿದ ಛಾಯಾಚಿತ್ರಗಳೂ

ಮಾಸದೆ ಉಳಿದುಬಿಟ್ಟಿದ್ದವು.

ಚಿತ್ರಕಾರನು ಸ್ಫಟಿಕಪಟದ ಮೇಲೆ ರೇಖೆಗಳನ್ನೆಳೆಯುತ್ತ ಚಿತ್ರ ಬರೆದು, ಅವುಗಳಲ್ಲಿ ತನ್ನಿಷ್ಟದ ಮೇರೆಗೆ ಬಣ್ಣಗಳನ್ನು ತುಂಬುವಂತೆ ಸಮೀರನು ತನ್ನ ಕುಂಚಿನಿಂದ ತರಂಗಗಳ ಅಂತರಂಗಕ್ಕೆ ಬಣ್ಣ ಬಳಿಯುತ್ತಿದ್ದನು ವಿಶ್ವಸಂಚಾರಿಯಾದ ಸಮೀರನ ನಿರೀಕ್ಷಣಶಕ್ತಿಯನ್ನು ನೋಡಿ ತರಂಗಗಳು ಆಶ್ಚರ್ಯಚಕಿತವಾಗಿದ್ದವು.

ತರಂಗಗಳನ್ನು ಸಂಗಡ ಕರೆದುಕೊಂಡು ಸಮೀರನೊಮ್ಮೆ ವಿಹರಿಸುತ್ತಿರುವಾಗ ಎಂದನು— "ಇದೋ! ನಮ್ಮ ಮುಂದೆ ಅಪಾರ ಪ್ರದೇಶವು ಹಬ್ಬಿಕೊಂಡಿದೆಯಷ್ಟೇ! ಈ ಭೂಲೋಕದ ವಿಸ್ತೀರ್ಣದಲ್ಲಿ ಇದೊಂದು ಅಂಶ ಮಾತ್ರ ಆಗಿರಲು ಸಾಕು!"

ಅದನ್ನು ಕೇಳಿ ತರಂಗಗಳೆಂದವು— "ಸಮೀರದೇವಾ! ಭೂಲೋಕವು ಇಷ್ಟು ವಿಸ್ತಾರವಾಗಿರುವುದೇ?"

ಸಮೀರನೆಂದನು— "ಭೂಲೋಕವಂತೂ ಅಪಾರ ವಿಸ್ತಾರವುಳ್ಳದ್ದಾಗಿಯೇ ಇದೆ; ಆದರೆ ಭೂಲೋಕದಂತಹ ಇನ್ನೂ ಎಷ್ಟೋ ಲೋಕಗಳಿವೆ; ಅವೆಲ್ಲ ಭೂಲೋಕಕ್ಕಿಂತ ಎಷ್ಟೋ ಪಟ್ಟು ಸುಖಸಂಪನ್ನವಾಗಿವೆ!"

ತರಂಗಗಳೆಂದವು— "ಮತ್ತೆ ಬೇರೆ ಲೋಕಗಳಿವೆ ಎಂಬುದನ್ನು ನಿಮಗೆ ಯಾರು ಹೇಳಿದರು, ಸಮೀರದೇವಾ!"

ಅನುಭವಸಂಪನ್ನ ಪ್ರೌಢ ಮನುಷ್ಯನು ಏನೂ ತಿಳಿಯದ ಬಾಲಕರನ್ನು ನೋಡುವಂತೆ ಸಮೀರನು ತರಂಗಗಳನ್ನು ನಿಟ್ಟಿಸಿ ನೋಡುತ್ತ ಎಂದನು— "ಯಾರು ಹೇಳುವ ಅಗತ್ಯವೆಲ್ಲಿದೆ? 'ಸತ್ಯ'ಕ್ಕೆ ಸಾಕ್ಷ್ಯದ ಅಗತ್ಯವಿರುವಂತೆಯೇ

ಯಾವುದು ಇದೆಯೋ ಅದನ್ನು ಇದೆಯೆಂದು ಹೇಳುವ ಆವಶ್ಯಕತೆಯೇ ಇಲ್ಲ. ''

ತರಂಗಗಳೆಂದವು— '' ಆ ಲೋಕಗಳನ್ನು ನೀವು ನೋಡಿರುವಿರಾ, ಸಮೀರದೇವಾ ? ''

ಸಮೀರನೆಂದನು— '' ಬರಿ ದೂರದಿಂದ ನೋಡಿರುವೆನೆಂಬಲ್ಲ, ಅಲ್ಲಿ ಇದ್ದು ಬಂದಿರುವೆನು. ಅನುಭವವಿಲ್ಲದೆ ಮಾತನಾಡುವುದೆಂದರೆ ಕಡ್ಡಿಗಳ ಮಹಡಿ ಕಟ್ಟಿದಂತೆಯೇ ಸರಿ! ಯಾವಾಗ ಕುಪ್ಪಳಿಸಿ ಬೀಳುವುದೋ ಹೇಳಲುಬಾರದು !......

'' ಆ ಲೋಕಗಳಲ್ಲಿ ಪ್ರವಾಸ ಮಾಡುವುದು ಬಲು ಕಷ್ಟದ ಕೆಲಸ. ಭೂಲೋಕದಿಂದ ಮೇಲಣ ಲೋಕಗಳಿಗೆ ಹೋಗಲು ತುಂಬಾ ಸಮಯ ಹತ್ತುತ್ತದೆ. ಒಂದು ಮಾನವ ಜನ್ಮದ ಅವಧಿಯೇ ಬೇಕಾಗುವುದೆನ್ನಬಹುದು. ಹೌದು. ಅಮರರಿಗೆ ಮಾತ್ರ ಇದು ಸಹಜಸಾಧ್ಯ. ಮರಣಾಧೀನರೇ ಇರಲಿ. ಅಮರರೇ ಇರಲಿ, ಅಲ್ಲಿಗೆ ಹೋಗಲು ಸಕಲ ವಿಧದ ಸಿದ್ಧತೆ ಬೇಕು. '

ಸಮೀರನ ಮಾತು ಕೇಳಿ ತರಂಗಗಳೆಂದವು— ''ಎಂತಹ ಸಾಮಗ್ರಿ ಬೇಕಾಗುತ್ತದೆ, ಸಮೀರದೇವ?''

ಸಮೀರನೆಂದನು— '' ಶೂರನ ಶೌರ್ಯ, ವೀರರ ಎದೆಗಾರಿಕೆ, ಧೀರನ ಧೈರ್ಯ, ವಿವೇಕದ ಗಾಂಭೀರ್ಯ— ಇಷ್ಟಿದ್ದರೆ ಸಾಕು! ಇಷ್ಟು ಸಾಮಗ್ರಿಯಿದ್ದರೆ ಅಲ್ಲಿ ಹೋಗಲು ಅನುಮತಿಪತ್ರ ದೊರೆಯುತ್ತದೆ. ''

ತರಂಗಗಳು ಕೇಳಿದವು— '' ಈ ಅನುಮತಿಪತ್ರ ಯಾರಿಂದ ಪಡೆಯುವುದು, ಸಮೀರದೇವ ? ''

ಸಮೀರನು ಉತ್ತರಿಸಿದನು— '' ರಾಜ್ಯದ ಹಕ್ಕು-

ದಾರರಿಗೆ ಪಟ್ಟ ತಂತಾನೇ ದೊರೆಯುವಂತೆ, ಈ ಸಾಮಗ್ರಿ ಯಿದ್ದರೆ ತಂತಾನೇ ಅನುಮತಿಪತ್ರ ದೊರೆಯುವುದು."

ತರಂಗಗಳು ಕುತೂಹಲದಿಂದ ಕೇಳಿದವು— "ತಾವು ವಾಸಮಾಡಿದ ಲೋಕಗಳ ಹೆಸರೇನು? ಅಲ್ಲಿ ತಾವೇನೇನು ಕಂಡಿರಿ?"

ಸಮೀರನೆಂದನು— "ಪ್ರಭಾತದ ಅರುಣೋದಯವನ್ನು ನೀವು ನಿತ್ಯ ನೋಡುವಿರಷ್ಟೇ! ಅದರ ವರ್ಣನೆಯನ್ನು ಇದ್ದಕ್ಕಿದ್ದಂತೆ ನೀವು ಮಾಡಬಲ್ಲಿರಾ? ಎಷ್ಟೋ ಶಬ್ದಗಳನ್ನು ಪೋಣಿಸಿದರೂ ಆ ಸೌಂದರ್ಯದ ಯಥಾರ್ಥ ಚಿತ್ರಣ ಸಾಧ್ಯವೇ? ಎಲ್ಲಿ ವಿಪುಲ ಸೌಂದರ್ಯ, ಅಗಣಿತ ಸಂಪತ್ತು, ಅಪಾರ ವೈಭವ ಇದೆಯೋ ಅದರ ವರ್ಣನೆಯನ್ನು ಹೇಗೆ ಮಾಡಲಾದೀತು?.... .... .... ನಾನಿಷ್ಟೇ ಹೇಳಬಲ್ಲೆ— ಇಲ್ಲಿಂದ ಆ ಲೋಕಗಳ ಅಂತರವು ಕಲ್ಪನೆಗೂ ನಿಲುಕದಷ್ಟಿದೆ; ಮನಸ್ಸಿನ ಪ್ರವೇಶವೂ ಆಗದಷ್ಟು ಅಲ್ಲಿ ಬಂದೋಬಸ್ತಿದೆ; ವರ್ಣನೆ ಮಾಡುಮಾಡುತ್ತಲೆ ಬುದ್ಧಿಯು ಕುಂತವೇ ಆಗುವಂತೆ ಆ ಸ್ಥಿತಿಯಿದೆ."

ತರಂಗಗಳು ಖಿನ್ನಮನಸ್ಸಿನಿಂದೆಂದವು— "ಒಬ್ಬ ಹೊಟ್ಟೆಬಾಕನೆದುರಿಗೆ ಪಕ್ವಾನ್ನಗಳ ತಟ್ಟೆಗಳನ್ನು ಬಡಿಸಿಟ್ಟು, ಅವನ ನಾಲಿಗೆಗೆ ನೀರು ಬಿಡುವಂತೆ ಮಾಡಿದಂತೆಯೇ ನಿಮ್ಮ ಮಾತು, ಸಮೀರದೇವ! ತನುವಿನ ಪ್ರಾಣಕ್ಕೆ ತನುವಿನ ಪರಿಘವೇ ಇರುವಂತೆ ನಮ್ಮ ಜೀವನ! ನಮ್ಮ ಪರಿಘ ಬಿಟ್ಟು ನಮ್ಮ ಅಡಿ ಹೊರಗೆ ಬಿದ್ದಿಲ್ಲ. ಹೊರಗಿನ ಸುಖ ಸಂಪತ್ತುಗಳ ಕಲ್ಪನೆಯೇ ನಮಗಿಲ್ಲ. ನಿದ್ದೆ ಮಾಡುವ ಮುದುಕಿಯನ್ನು ಕೋಳಿ ಕೂಗಿ ಎಚ್ಚರಿಸುವಂತೆ ನಮ್ಮ ಜಿಜ್ಞಾಸೆಯನ್ನು ನೀವು

ಜಾಗೃತಗೊಳಿಸಿದಿರಿ— ಇನ್ನದನ್ನು ನೀವೇ ತೃಪ್ತಿಗೊಳಿಸ ಬೇಕು!"

ಸಮೀರನು ಉತ್ತರಿಸಿದನು— "ಇದ್ದಕ್ಕಿದ್ದಂತೆ ವರ್ಣಿಸಲು ಬೃಹಸ್ಪತಿಗಾದರೂ ಸಾಧ್ಯವೋ— ಹೇಳಲಿಕ್ಕಾಗದು. ಹೀಗಿದ್ದರೂ ನಿಮ್ಮ ತೀವ್ರ ಇಚ್ಛೆ ನೋಡಿ, ನೆನಪಾದಷ್ಟು ಹೇಳುವೆ, ಚಿತ್ತಗೊಟ್ಟು ಕೇಳಿರಿ. ಯಾಕೆಂದರೆ, ಆ ಲೋಕಗಳಲ್ಲಿ ಪ್ರವೇಶಿಸುವುದೆಂದರೆ, ಭೂಮಿಯ ಮೇಲಿನ ಮೊಣಕಾಲಿನಷ್ಟು ಮಾನವನು ಮುಗಿಲಿಗೆ ಕೈಹಚ್ಚಲು ಹೊರಟಂತೆಯೇ ಸರಿ. ಇಂತಹ ಲೋಕಗಳ ವರ್ಣನೆಯನ್ನು ಕೇಳುವುದೂ ಮಹದ್ಭಾಗ್ಯವೇ ಇದೆ. ಹೀಗೆ ವರ್ಣಿಸುವವನ ದರ್ಶನವೂ ಒಂದು ಪಾವನ ತೀರ್ಥವೇ ಅಹುದು."

ಸಮೀರನ ಈ ಉದ್ಗಾರಗಳನ್ನು ಕೇಳಿ, ಮುಗ್ಧ ಸ್ವಭಾವದ ತರಂಗಗಳು ಕೈಜೋಡಿಸಿ ಅನನ್ಯಭಾವದಿಂದ ಸಮೀರನಿಗೆ ವಂದಿಸಿದವು. ವಂದನೆಯನ್ನು ಸ್ವೀಕರಿಸಿ, ಸಮೀರನು ಹುರುಪುಗೊಂಡು ಎಂದನು.— "ನಾನು ಹೋಗುವ ಮಾರ್ಗದಲ್ಲಿ ಸೂರ್ಯಲೋಕವು ಮೊದಲು ಕಾಣಿಸಿತು. ಹಾದಿಯಲ್ಲಿ ಸೆಕೆಯು ಅಸಹನೀಯವಾಯಿತು. ಅಲ್ಲಿಯ ಧಗೆಯು ಜೀವವನ್ನು ಗಾಸಿಗೊಳಿಸಿತು. ಅಲ್ಲಿ ಅಡಿ ಬೀಳುತ್ತಲೇ ಸೂರ್ಯರಶ್ಮಿಗಳು ಮೈಯೊಳಗೆ ನಡತೊಡಗಿದವು. ಎಲ್ಲಿ ನೋಡಿದಲ್ಲಿ ಸೂರ್ಯನೇ ಕಾಣುವನು. ಹುಲ್ಲು, ಕಡ್ಡಿ, ಮನೆ, ಮಹಡಿ— ಅಲ್ಲಿ ನೋಡಿದುದೆಲ್ಲ ಪ್ರತಿ ಸೂರ್ಯನಂತೆ. ನನ್ನ ತನು ಹಾಗೂ ತನುವಿನಲ್ಲಿಯ ರೋಮರೋಮಗಳು ಸೂರ್ಯರಶ್ಮಿಗಳಿಂದ ತುಂಬಿಹೋದವು. ಎಲ್ಲಿ ನೋಡಿದಲ್ಲಿ ಪ್ರಖರ ಕಿರಣಗಳು. ಅಲ್ಲಿ ಅಂಧಃಕಾರವು ಔಷಧಕ್ಕೂ ಇಲ್ಲ. ಅಲ್ಲಿ ಹಗಲು

ಆಗುವುದು ಯಾವಾಗ, ರಾತ್ರಿ ಬರುವುದು ಯಾವಾಗ ತಿಳಿಯುವುದೇ ಇಲ್ಲ. ಅಲ್ಲಿಯ ಕಿರಣಗಳು ಇಷ್ಟು ಬಲವತ್ತರವಾಗಿವೆಯಲ್ಲ—ಯಾರ ಸೊಪ್ಪು ಇಲ್ಲ ಅವಕ್ಕೆ; ಮನೆ-ಮಹಡಿ-ಕಲ್ಲು-ಮರಕೂ ಎಲ್ಲದರಲ್ಲೂ ಅವು ಪ್ರವೇಶಿಸುತ್ತವೆ. ಮನುಷ್ಯರನ್ನಂತೂ ಅವು ಕಡೆದುತೆಗೆಯುತ್ತವೆ. ಇಂತಹ ಪ್ರಖರತೆಯಲ್ಲಿ ವಿಶ್ರಾಂತಿಗೆ ಎಡೆಯೆಲ್ಲಿ? ಅಲ್ಲಿ ನಾನು ವಾಸ ಮಾಡುವುದಾದರೂ ಎಂತು? ಮುಚ್ಚಿದ ಕಣ್ಣೆವೆಗಳಲ್ಲಿಯೂ ಆ ಕಿರಣಗಳು ಹೊಕ್ಕುಬಿಡುತ್ತಿದ್ದವು. ಅಲ್ಲಿ ನಿಲ್ಲುವುದೂ ಅಸಾಧ್ಯವಾಗಿ ಕಾಲಿಗೆ ಬುದ್ಧಿ ಹೇಳಿದೆ, ಹಾಗೂ ಶೀತಲತೆಗಾಗಿ ಚಂದ್ರಲೋಕಕ್ಕೆ ಹೋದೆ."

ಹೀಗೆಂದು ಸಮೀರನು ಸ್ವಲ್ಪ ಹೊತ್ತು ಸುಮ್ಮನಾದನು, ಆಗ ತರಂಗಗಳು ಅಧೀರತೆಯಿಂದ ಕೇಳಿದವು— "ನಿಮಗೆ ಆ ತಂಪು ಚಂದ್ರಲೋಕದಲ್ಲಿ ದೊರೆಯಿತೇ ಸಮೀರದೇವ!"

ಸಮೀರನೆಂದನು— "ನೀರಿಲ್ಲದೆ ಒಣಗಿದ ಗಿಡದ ಮೇಲೆ ಝರ್ಝುಮ್ ನೀರಿನ ಧಾರೆ ಬಿದ್ದೊಡನೆ ಅದರ ಎಲೆ ಎಲೆ ಚೇತರಿಸಿಕೊಂಡ ಹಾಗೆ ನನಗೆ ಅಲ್ಲಿ ಅನಿಸಿತು. ಚಂದ್ರಲೋಕದಲ್ಲಿ ಚಂದ್ರನ ಶೀತಲತೆಯಂತೂ ಇದ್ದೇ ಇದೆ— ಅದರೊಡನೆ ಝುಳುಝುಳು ಹರಿಯುವ ನಿರ್ಝರಗಳ ತಂಪೂ ಎಲ್ಲೆಡೆ ತಿವಿವೆ, ಚಂದ್ರ-ಚಂದ್ರಿಕೆಯರ ಪ್ರೇಮದ ಮಹತಿಯನ್ನು ಬಣ್ಣಿಸಲಂತೂ ಉಪಮೆಗಳೇ ಇಲ್ಲ. ಚಂದ್ರ-ಚಂದ್ರಿಕೆಯರ ನಿರ್ವ್ಯಾಜ ಪ್ರೇಮದ ಮುದ್ರಿಕೆ ಅಖಿಲ ಚಂದ್ರಲೋಕದ ಮೇಲೆ ಮೂಡಿದೆ. ಅಲ್ಲಿಯ ತರುಲತೆಗಳು ಒಂದನ್ನೊಂದು ಆಶ್ರಯಿಸಿ ಬೆಳೆದ ರೀತಿಯೂ ಪ್ರೇಮದರ್ಶಕವೇ. ಅಲ್ಲಿಯ ಶಬ್ದ, ಭಾಷೆ, ಉಚ್ಚಾರ ಎಲ್ಲವೂ ಪ್ರೇಮದ ಸ್ಫುರಣವೇ.

ಅಲ್ಲಿ ಪ್ರೇಮದಿಂದಲೇ ಸ್ಫೂರ್ತಿ, ಪ್ರೇಮದ್ದೇ ಕೃತಿ. ನಿಷ್ಪ್ರೇಮಕ್ಕೂ ಆಕಂಠ ಪ್ರೇಮಾಮೃತ ಕುಡಿಸಿ, ತೃಪ್ತಗೊಳಿಸುವ ಪ್ರೇಮಮಯ ಚಂದ್ರಲೋಕವದು. ಅಲ್ಲಿಯ ಸಮಾಧಾನದ ಪರಿಣಾಮವಾಗಿ ರೋಮರೋಮಗಳಿಂದಲೂ ಮೌಕ್ತಿಕ ಬಿಂದುಗಳು ಉದುರುವವು, ಹಾಗೂ ಆನಂದವು ಉಕ್ಕೇರುವುದು."

ತರಂಗಗಳು ಕೇಳಿದವು— "ಆಮೇಲೆ ಬೇರೆ ಯಾವ ಲೋಕಗಳನ್ನು ನೋಡಿದಿರಿ, ಸಮೀರದೇವ?"

"ಕೇಳಿರಿ, ಕೇಳಿರಿ!" ಎಂದ ಸಮೀರ. "ತರುವಾಯ ನಾನು ಗಂಧರ್ವಲೋಕಕ್ಕೆ ಹೋದೆನು. ಗಾನವೇ ಅಲ್ಲಿಯ ಪ್ರಾಣ! ಗಾನವೇ ಅಲ್ಲಿಯ ಜೀವನ, ಗಾನವೇ ಪೋಷಣ, ಗಾನವೇ ಪ್ರಾಶನ! ಗಂಧರ್ವರು ಬೈಠಕು ಹಾಕಿ ಗಾಯನ ಮಾಡಲು ಕುಳಿತರೆಂದರೆ, ಅರಿವು ಮರೆತು ಕೊಡವರು. ಗಂಟೆ, ತಿಂಗಳು, ವರ್ಷಗಳು ಗೊತ್ತಾಗದೆಯೆ ಉರುಳುವವು. ಅವರ ಆಲಾಪನೆಗಳು, ತಾನಗಳು ಗಂಧರ್ವಲೋಕದಲ್ಲಿಂದ ಭೂಲೋಕವನ್ನೂ ಗರಗರ ತಿರುಗಿಸುವವು. ಹಾಡು-ಮಾತು ಎಲ್ಲ ಅಲ್ಲಿ ಒಂದೇ. ಮಂದ್ರಸಪ್ತಕದಿಂದ ತಾರಸ್ಸಪ್ತಕದ ವರೆಗಿನ ಸ್ವರಗಳು ಯಾರ ಪರಿವೆಯೂ ಇಲ್ಲದೆ ಮೂಗು, ಕಿವಿ, ಕಣ್ಣು, ಉಸುರು, ಮಿದುಳಿನಲ್ಲಿಯೂ ಪ್ರವೇಶಿಸಿ ತಮ್ಮ ಹಾಡು ಪ್ರಾರಂಭಿಸುತ್ತಿದ್ದವು. ಅಲ್ಲಿ ಕಾಲಿಟ್ಟೊಡನೆ ಗಾನವು ಸೆರೆಹಿಡಿದು ಬಿಡುವುದು. ಮೋಹಿಸುವ ಸ್ತ್ರೀಗೆ ಅವಿವೇಕಿ ಪುರುಷನು ವಶನಾಗುವಂತೆ, ಮೀನುಗಾರನ ಬಲೆಯಲ್ಲಿ ಮೀನು ಸಿಕ್ಕಿಬೀಳುವಂತೆ, ಪಂಜರದಲ್ಲಿ ಪಕ್ಷಿ ಸೆರೆಹಿಡಿಯಲ್ಪಡುವಂತೆ ಶ್ರಾವಕನು ಈ ಗಾನದ ಪಾಶ

ದಲ್ಲಿ ಸಿಲುಕುವನು. ಪರಿಮಳವು ದಿನ ರಾತ್ರಿಯೆನ್ನದೆ ಇಡುಗುವಂತೆ, ಅಲ್ಲಿ ಗಾನಕ್ಕೆ ವೇಳೆಯ ನಿಯಮವಿಲ್ಲ. ಪ್ರಕಾಶವನ್ನು ಮೂಡಿಸರೂ ಅದು ಹೋಗದಿರುವಂತೆ ಅಲ್ಲಿಯ ಗಾನವು ಕಿವಿ ಮುಚ್ಚಿದರೂ ಹಿಂದಕ್ಕೆ ಸರಿಯುವುದಿಲ್ಲ. ಒಮ್ಮೆ ಅಲ್ಲಿಗೆ ರಜನಿಯೂ ಅವಳ ಗೆಳತಿ ನಿದ್ರಾದೇವಿಯೂ ಹೋಗಿದ್ದರಂತೆ. ಅಲ್ಲಿಯ ಗಾನದಿಂದ ಅವರು ಮೈಮರೆತರು. ರಜನಿಯು ಸುಸ್ವರದಿಂದ ಹಾಡತೊಡಗಿದಳು. ಹಾಗೂ ನಿದ್ರಾದೇವಿಯು ಗಾನದಲ್ಲಿ ತಲ್ಲೀನಳಾಗಿ ಎಚ್ಚರಿಕೆಯಲ್ಲಿಯೇ ಕುಳಿತಳು. ಆಗೆಲ್ಲಿಯ ನಿದ್ದೆ ? ಹೆಸರಿಗೂ ನಿದ್ದೆಯಿಲ್ಲ ಅಲ್ಲಿ ! ಆ ಗಾನದ ಕಾವಲಿನಲ್ಲಿ ವಿಚಾರಗಳು ತಲೆಯಲ್ಲಿ ಸೇರುವುದೂ ಅಸಾಧ್ಯವೇ ಸರಿ. ಆ ಗಾನಕ್ಕೆ ನಾನು ಸೆರೆಯಾಳಾದರೆ ಮುಂದೆ ಹೋಗುವುದು ಹೇಗೆ ಎಂಬ ಪ್ರಶ್ನೆ ನನ್ನ ಮನಸ್ಸಿನಲ್ಲಿ ಮೂಡಿತು. ಯುಕ್ತಿ–ಶಕ್ತಿಗಳ ನೆರವು ಪಡೆದೆ, ಹಾಗೂ ಆ ಗಾನದ ಪ್ರಭಾವದಿಂದ ಪಾರಾಗಿ ಬಂದೆ ! ”

ತರಂಗಗಳು ಕೇಳಿದವು— “ ಆಮೇಲೆ ಎಲ್ಲಿ ಹೋದಿರಿ, ಸಮೀರದೇವ ? ”

ಸಮೀರನೆಂದನು — “ ತರುವಾಯ ದೇವಲೋಕಕ್ಕೆ ಹೋದೆ. ದೇವತೆಗಳ ರಾಜ್ಯದಲ್ಲಿ ಎಲ್ಲರೂ ದೇವತೆಗಳೇ. ಅಲ್ಲಿ ದೇವತೆಗಳು ಯಾರು, ದೇವತೆಗಳಲ್ಲದವರು ಯಾರು— ತಿಳಿಯುವುದು ಕಷ್ಟ. ರಾಜಕನ್ಯೆ ಯಾರು, ಅವಳ ಸಖಿ ಯಾರು ಎಂಬುದು ಹೊಸಬನಿಗೆ ತಿಳಿಯದೆ ಹೋಗುವಂತೆ, ದೇವಲೋಕದಲ್ಲಿ ಕಾಲಿಟ್ಟವನಿಗೆ ಆಗುವುದು. ನಾನಂತೂ ಕಾಲಿಟ್ಟೊಡನೆ, ಕೈಜೋಡಿಸಿ, ಕಣ್ಣು ಮುಚ್ಚಿ, ತಲೆಬಾಗಿ ಹಿಯೇ ನಿಂತೆ ! ಯಾರೊಬ್ಬ ದೇವತೆಗಾದರೂ ನಮಸ್ಕರಿಸದೆ

ಇರುವುದರಿಂದ ಪಾಪ ತಟ್ಟಬಾರದೆಂದು ಹಾಗೆ ಮಾಡಿದೆ. ಮರಳಿನ ಕಣಗಳನ್ನು ಎಣಿಸಬಹುದು, ಚಿಗುರುವ ಹುಲ್ಲಿನ ಲೆಕ್ಕವನ್ನಿಡಬಹುದು, ಆದರೆ ಜಾಗರೂಕರಾಗಿದ್ದುಕೊಂಡು ದೇವತೆಗಳ ಸಂಖ್ಯೆಯನ್ನೆಣಿಸುವುದು ಸಾಧ್ಯವೇ ಇಲ್ಲ. ಅಲ್ಲಿ ಹೋಗುವವರು ದೇವತೆಗಳಂತೆಯೇ ಆಗುವರು. ಮುಗಿದ ಕ್ಷಣಗಳಲ್ಲಿ ದೇವತೆಯ ಭಾಗವಾಗಿ, ದೇವತೆಯಂತೆಯೇ ನಾನೂ ಕಾಣತೊಡಗಿದೆ! ಕನಸಿನಲ್ಲಿ ನಮ್ಮನ್ನು ನಾವೇ ಕಾಣುವಂತೆಯೇ ನಾನು ನನ್ನನ್ನು ನೋಡತೊಡಗಿದೆ!"

"ಆಮೇಲೆ ಏನಾಯಿತು, ಸಮೀರದೇವ!" — ತರಂಗಗಳು ಕೇಳಿದವು.

"ಅಲ್ಲಿಂದ ಮುಂದೆ ಹೋದೆ." ಸಮೀರನು ಮುಂದುವರಿದನು. "ಅಖಿಲ ವಿಶ್ವವನ್ನು ಆಚ್ಛಾದಿಸಿಬಿಡಬಹುದಾದ ರತ್ನಖಚಿತವಾದ ಭವ್ಯ ಮಂಟಪ ಕಂಡಿತು. ಮಂಟಪದ ಮೇಲೆ ಸುವರ್ಣಕಲಶವು ಝಗಝಗಿಸುತ್ತಿತ್ತು. ಬಾಡದ ಹೂಗಳ ಮಾಲೆಗಳನ್ನು ಎಲ್ಲೆಲ್ಲಿಯೂ ತೂಗುಬಿಟ್ಟಿದ್ದರು. ಬಣ್ಣಬಣ್ಣದ ಬಾವುಟಗಳನ್ನೂ ಎಲ್ಲೆಲ್ಲಿಯೂ ಹಾರಿಸಿದ್ದರು. ಅಲ್ಲಿಯ ವೈಭವದ ಪ್ರಭೆಯು ದೂರದವರೆಗೆ ಹಬ್ಬಿತ್ತು. ಸುಖ-ಸಂಪತ್ತುಗಳ ಮಹಾಸಾಗರವು ಅಲ್ಲಿ ಮೇರೆವರಿದಿತ್ತು. ಅದನ್ನೆಲ್ಲ ನೋಡಿ ನನ್ನಡಿ ಮುಂದಕ್ಕೆ ಬೀಳದಾಯಿತು. ನಿದ್ದೆಯಿಂದ ಒಮ್ಮೆಲೆ ಎಚ್ಚತ್ತವನಿಗಾಗುವಂತೆ ನನಗಾಯಿತು. ನಿತ್ಯದ ಪ್ರವಾಸವನ್ನು ಮುಂದಿಟ್ಟುಕೊಂಡು ತನ್ಮಯತೆಯಿಂದ ಏಕಾಗ್ರವಾಗಿ ಪ್ರಾರ್ಥಿಸುತ್ತಿರುವ ಭಕ್ತನೆದುರಿಗೆ ಆಕಸ್ಮಿಕವಾಗಿ ಭವ್ಯ, ಸಚೇತನ, ಚತುರ್ಭುಜ ಸ್ವರೂಪವು ಬಂದು ನಿಂತರೆ ಅವನು ದಿಗ್ಭ್ರಾಂತನಾಗುವಂತೆ ಅಲ್ಲಿಯ ವೈಭವದ

ಆಪಾರ ವಿಸ್ತಾರ ಕಂಡು ನನಗಾಯಿತು.''

ತರಂಗಗಳು ಕೇಳಿದವು— ''ಆ ಅಗಣಿತ ವೈಭವದ ಸ್ವಾಮಿ ಯಾರು?''

ಸಮೀರನೆಂದನು — ''ಮಂಟಪವನ್ನು ನೋಡಿಯೇ ಮನಸ್ಸು ಗೊಂದಲಗೊಂಡಿತು. ಮನಸ್ಸು ದಿಗ್ಭ್ರಮೆಗೊಂಡು ದರಿಂದ ನನ್ನ ಗತಿಯೇ ನಿಂತುಬಿಟ್ಟಿತು. ನನ್ನ ವೇಗವು ಸಾಗದಾಯಿತು.

''ಅಲಲಾ'' ಎಂದು ತಮ್ಮ ಅತೃಪ್ತಿಯನ್ನು ಸೂಚಿಸುತ್ತ ತರಂಗಗಳೆಂದವು—''ಆ ಲೋಕಗಳು ಎಲ್ಲಿವೆ, ಸಮೀರದೇವ?''

ಸಮೀರನೆಂದನು— ''ತೀರ ತೀರ ದೂರದಲ್ಲಿ! ಆಕಾಶದ ಆಚೆಗೂ ದೂರ ದೂರ!! ನಿದ್ರೆಯು ಕೊನೆಯಾಯ ಜಾಗೃತಿ— ಹಾಗಿದೆ ಅಲ್ಲಿ. ಆಕಾಶವು ಮುಗಿಯುವಲ್ಲಿಂದ ಈ ಲೋಕಗಳ ಮಾಲೆ. ಸಪ್ತಸಮುದ್ರಗಳನ್ನು ಸಂಗಾತಿಯಿಲ್ಲದೆ ಒಬ್ಬೊಂಟಿಗನಾಗಿ ದಾಟುವಾಗ ಅನಿಸುವಂತೆ ನನಗಾಗ ಅನಿಸಿತು.''

''ಅಲ್ಲಿಗೆ ತಾವು ಹೇಗೆ ಹೋದಿರಿ, ಸಮೀರದೇವ?'' ತರಂಗಗಳು ಕೇಳಿದವು.

''ಹೇಗೆಂದರೆ? ಮೇಘದ ಅಶ್ವವನ್ನು ಏರಿ....'' ಸಮೀರನು ಉತ್ತರಿಸಿದನು. ''ಮೇಘರಾಜನು ನನ್ನ ಪರಮಮಿತ್ರನು. ಆವನು ನನಗೆ ಮೇಜವಾನಿ ಕೊಟ್ಟನು. ಯಥೇಚ್ಛವಾಗಿ ಭೋಜನ ಮುಗಿಸಿ, ವಾಮಕುಕ್ಷಿ ತೆಗೆದುಕೊಂಡು, ಅಶ್ವಶಾಲೆಗೆ ಹೋದೆನು. ಸುಖವಿಹಾರಕ್ಕಾಗಿ ಒಂದು ಅಶ್ವವನ್ನು ಆರಿಸಿಕೊಂಡೆನು. ಅಶ್ವಾರೂಢನಾಗಿ ಕಡಿವಾಣ ಬಿಗಿದು ಜಗ್ಗಿದೊಡನೆ ಅಶ್ವವು ನೆಗೆಯಿತು. ಏನು ಅದರ ವೇಗ? ಮಿಂಚನ್ನೂ ಹಿಂದಕ್ಕೆ ಹಾಕುವಂತಹದು!''

ಮತ್ತೆ ಮುಂದುವರಿದು ಸಮೀರನೆಂದನು– "ಆಹಹಾ! ಏನು ಆ ಅಶ್ವದ ಅಪ್ರತಿಮ ಸೌಂದರ್ಯ! ಸ್ವರ್ಗೀಯ ಅಪ್ಸರೆಯೂ ಅದರ ಮುಂದೆ ಕಂದಿಕುಂದುವಳು! ಮನಸೋಕ್ತವಾಗಿ ಸುಖ ಸೂರೆಗೊಳ್ಳುವ ಆ ರಸಿಕ ಅಶ್ವವು ನಡುನಡುವೆ ವಾರಯೋಷಿತೆಯಂತೆ ಒಯ್ಯಾರದಿಂದ ಬಾಗುತ್ತ ಬಳುಕುತ್ತ ನಡೆಯುವುದು, ನೃತ್ಯಾಂಗನೆಯಂತೆ ಕಾಲ್ಗೆಜ್ಜೆಯ ಝಣತ್ಕಾರ ಮಾಡುತ್ತ ತನ್ನ ಮೈ ಸುತ್ತು ತಾನೇ ತಿರುಗುತ್ತ ಸಾಗುವುದು, ನಡುವೆಯೇ ಥೈಥೈ ನೃತ್ಯವೆಸಗುವುದು. ಆ ನೃತ್ಯವು ವರ್ಣಿಸಲಸದಳ! ಮಯೂರನೃತ್ಯವನ್ನೂ ಮೀರುವಂತಹದು! ಮೇಘಾಶ್ವವನ್ನೇರಿ ಸುಖವಿಹಾರ ಮಾಡುವಾಗಿನ ಸಂಭ್ರಮ-ಸುಮ್ಮಾನಗಳನ್ನು ಎನಿತೆಂದು ಬಣ್ಣಿಸಲಿ? ಆಹಹಾ! ಆಹಹಾ!!"

ಸಮೀರನು "ಆಹಹಾ!" ಎನ್ನುತ್ತಿರುವಾಗಲೇ ತರಂಗಗಳೆಂದವು—"ಇಂತಹ ವೇಗಶಾಲಿ ಅಶ್ವವನ್ನೇರಿ ಹೋದವರಾದ ನೀವು ಹಿಂದಕ್ಕೇಕೆ ಮರಳಿದಿರಿ, ಸಮೀರದೇವ?"

ಸಮೀರನೆಂದನು—"ಆ ಉತ್ತಮಾಶ್ವದ ಮೇಲೆ ಆರೂಢನಾಗಿ ನಾನೇನೋ ಮುಂದಕ್ಕೆ ಹೋದೆನು. ಆದರೆ ಅದು ತನ್ನಿಚ್ಛೆಯಂತೆಯೇ ನನ್ನನ್ನು ಒಯ್ಯತೊಡಗಿತು. ಆದರ ಲಹರಿಯ ಮೇರೆಗೆ ಹೋಗುವದು ನನಗೆ ಸೈಯೆನಿಸಲಿಲ್ಲ. ಕಣಿವಾಣ ಹಿಡಿದವನು ಕುದುರೆಯ ಒಡೆಯನಾಗಲಾರದವನಾದರೆ ಅದರ ಪ್ರಯೋಜನವೇನು? ಆ ಲೋಕದಲ್ಲಿಯ ಲಖಲಖಾಟ, ಝಗಝಗಾಟ, ವಿಪುಲತೆ, ವೈಭವ ನೋಡಿ, ನಾನು ದಿಗ್ಭ್ರಮೆಗೊಂಡೆನು. ನನ್ನ ಧೈರ್ಯ ಕಳಚಿತು. ಕೈಯೊಳಗಿನ ಕಡಿವಾಣ ಸಡಿಲಾಯಿತು. ಒಡನೆ ಅಶ್ವವು ಹಿಂದೋಡಲು ಪ್ರಾರಂಭಿಸಿತು. ಆಗ ನಾನು ಹಿಂದಿರುಗ

ಬೇಕಾಯಿತು."

"ಅಲಲಾ!" ಎಂದು ತರಂಗಗಳು ಮತ್ತೆ ಉದ್ಗರಿಸಿದವು— 'ಹಿಂದಕ್ಕೋಡತೊಡಗಿದ ಅಶ್ವವು ಮುಂದೆ ಎಲ್ಲಿಗೆ ಹೋಯಿತು, ಸಮೀರದೇವ ?"

"ತನ್ನ ರಾಜ್ಯದತ್ತ!" ಸಮೀರನು ಉತ್ತರಿಸಿದನು. "ನಾನು ಹೊರಟಲ್ಲಿಗೆ, ಮೇಘರಾಜ್ಯದತ್ತ! .... ಸುಖವಿಹಾರದಿಂದ ಮರಳಿದ ಕೂಡಲೆ ಪರಮಮಿತ್ರನಾದ ಮೇಘರಾಜನು ಪ್ರೇಮಾಲಿಂಗನವಿತ್ತನು. ಅನ್ಯಮೇಘಗಳು ವಿನಮ್ರವಾಗಿ ಮುಜುರೆ ಮಾಡಿದವು. ಮುಖ್ಯಮುಖ್ಯ ಮೇಘಗಳು ಅಂಗರಕ್ಷಕರಂತೆ ನನ್ನ ಸುತ್ತು ಬಳ್ಳಿವಿಡಿದು ನಿಂತವು. ಕುಲವಧುಗಳು ಮರೆಯಿಂದ ವಿನಯದಿಂದ ಸಸ್ಮಿತವಾಗಿ ನೋಡುವಂತೆ ಪ್ರಸನ್ನ ತಾರಕೆಗಳು ಸುಹಾಸವದನದಿಂದ ನನ್ನನ್ನು ಅಭಿನಂದಿಸಿದವು. ನಿರ್ಮಲಪ್ರೇಮದಿಂದ ತನ್ನ ವಲ್ಲಭನನ್ನು ಆಕರ್ಷಿಸುವ ಸುಶೀಲ ಲಲನೆಯರು ತಮ್ಮ ನಿರ್ವಿಕಾರ, ಮಧುರ ನೇತ್ರ-ಕಟಾಕ್ಷಗಳನ್ನು ಎಸೆಯುವಂತೆ ರೂಪಸಂಪನ್ನ ಸೌದಾಮಿನಿಯರು ಚಕಚಕಿಸುವ ತಮ್ಮ ವಜ್ರಸಮ ನೇತ್ರಕಟಾಕ್ಷಗಳನ್ನು ನನ್ನ ಕಡೆ ಬೀರುತ್ತ, ನನಗೆ ಹಾರ್ದಿಕ ಸ್ವಾಗತವಿತ್ತರು."

ತರಂಗಗಳು ಕೇದಳಿವು—"ಮೇಘಗಳ ರಾಜ್ಯವು ನಮ್ಮ ರಾಜ್ಯದಂತೆಯೇ ಇರುವುದೇ?"

"ಅಹುದು!" ಸಮೀರನೆಂದನು— "ರಾಜ್ಯಕ್ಕೆ ರಾಜ, ರಾಜನಿಗೆ ರಾಣಿ ಇವರು ಇದ್ದೇ ತೀರಬೇಕು! ರಾಜ, ರಾಣಿ, ಪ್ರಜೆ, ಸೈನ್ಯ, ದಾಸ, ದಾಸಿಯರು ಎಲ್ಲರೂ ಅಲ್ಲಿರುವರು! ಅಲ್ಲಿಯ ಸಮತೆಯೆಂತಹದು! ಒಂದೇ ದಾರದಲ್ಲಿ ಮುತ್ತುಗಳನ್ನು ಪೋಣಿಸಿ ಮಾಲೆ ಮಾಡುವಂತೆ ಅಲ್ಲಿಯ ಸಮತೆ

ಹಾಗೂ ಸೂತ್ರಬದ್ಧತೆ! ನೀವೇ ಮೇಲಕ್ಕೆ ನೋಡಿರಿ! ಮೇಘ ಗಳ ಗತಿಯನ್ನು ನಿರೀಕ್ಷಿಸಿರಿ! ಮುಂದಕ್ಕೆ ಹೋಗಲು ಒಂದು ಇನ್ನೊಂದನ್ನು ಬಿಡುವುದು! ಒಂದರ ಮೈಮೇಲಿಂದ ಇನ್ನೊಂದು ಹೋದರೂ ಸದ್ದಿಲ್ಲ, ಗಲಾಟೆಯಿಲ್ಲ! ಸುಖದಿಂದ, ಸಮಭಾವದಿಂದ, ಸರಾಗವಾಗಿ ಅಲ್ಲಿಯದೆಲ್ಲ ನಡೆಯುವುದು! ಇಷ್ಟೇ ಅಲ್ಲ, ಸೌಂದರ್ಯದ ಸೌಂದರ್ಯವೇ ಅಲ್ಲಿ ನೆಲಸಿರು ವುದು! ಅಲ್ಲಿಯ ಸುಶೋಭೆಗೆ ಎಣೆಯೇ ಇಲ್ಲ. ಓಡುವ ಪಂದ್ಯದಲ್ಲಿ ಮೇಘಗಳನ್ನು ಮೀರಿಸುವವರೇ ಇಲ್ಲ! ಅವು ಅಜಿಂಕ್ಯ! ಕವಿವರ್ಯರೆಲ್ಲರೂ ಮೇಘಗಳ ಮೋಹಿನಿಯಿಂದ ಮುಗ್ಧರಾಗಿರುವರು! ಕಾವ್ ಕಾವ್ ಎನ್ನುವ ಕರಿಕಾಗೆಗಳ ಮೇಲೂ ಕವನ ರಚಿಸುವ ಕವಿಗಳಿಗೆ ಈ ಮೇಘರಾಜರನ್ನು ಕುರಿತು ಸೂಕ್ತ ಕವನ ರಚಿಸುವದು ಸಾಧ್ಯವಾಗಿಲ್ಲ. ಮೇಘ ರಾಜ್ಯವು ಅವರ್ಣನೀಯ ಸೌಂದರ್ಯದ ಕಣಿ!"

ಸಮೀರನ ವರ್ಣನೆ ಕೇಳಿ, ತರಂಗಗಳು ಅಧೀರತೆಯಿಂದ ಎಂದವು—"ನಾವೂ ಮೇಘರಾಜ್ಯವನ್ನು ನೋಡಬಯಸು ತ್ತೇವೆ. ಅಲ್ಲಿಗೆ ಹೇಗೆ ಹೋಗುವುದು, ಸಮೀರದೇವ ?"

"ಆ ಕೆಲಸ ಹಗುರವಲ್ಲ. ನೀವು ಹೆದರಿಯೇ ಹೋಗುವಿರಿ!" ಸಮೀರನೆಂದನು. "ಮೊದಲು ನಿಮ್ಮ ಸಿದ್ಧತೆಯಾಗಲು ಬೇಕು."

"ಏನು? ಹಾದಿಯಲ್ಲಿ ಹಿಂಸ್ರಪಶುಗಳಿವೆಯೇ? ರಾಕ್ಷಸ ರಿರುವರೇ?" ತರಂಗಗಳು ಕೇಳಿದವು.

"ಛೆ! ಛೆ!" ಸಮೀರನೆಂದನು. "ಹಿಂಸ್ರ ಪಶು-ರಾಕ್ಷಸರು ಅಲ್ಲಿರಲು ಅದೇನು ಭೂಲೋಕವೇ? ಮನುಷ್ಯರನ್ನು ಹಿಂಸಿ ಸುವ ರಾಕ್ಷಸರು ಅಲ್ಲಿಗೆ ಏರಲಾರರು, ಅಲ್ಲಿ ಬಾಳಲಾರರು.

ಜಡವು ಏರಲವಾದ ಹೊರತು ಅಲ್ಲಿಗೆ ಏರಲಾರದು. ಅಶುದ್ಧ ಸುವರ್ಣವನ್ನು ಭಟ್ಟಿಯಲ್ಲಿ ಹಾಕಿ ಸುಟ್ಟ ಹೊರತು ಅದು ಅಪ್ಪಟವಾಗದಂತೆಯೇ ರಕ್ಕಸನ ರಕ್ಕಸತನವು ಸಮೂಲ ನಷ್ಟ ವಾಗದೆ ಆತನು ಮನುಷ್ಯನಾಗಲಾರನು. ಮನುಷ್ಯತ್ವವಿಲ್ಲದ ರಾಕ್ಷಸನು ಅಲ್ಲಿಗೆ ಮೇಲಕ್ಕೇರಬಲ್ಲನೇ? ಅಲ್ಲಿ ನಿಲ್ಲಬಲ್ಲನೇ? ಬದುಕಬಲ್ಲನೇ?''

''ಅಲ್ಲಿ ಪಶುಗಳೂ ಇಲ್ಲ, ರಾಕ್ಷಸರೂ ಇಲ್ಲ. ಎಂದಮೇಲೆ ಭೀತಿಯೇ?'' ತರಂಗಗಳು ಕೇಳಿದವು.

ಸಮೀರನೆಂದನು— ''ಗಗನಚುಂಬಿ ಗಿರಿಗಳನ್ನೇರುವಾಗ ಉತ್ತುಂಗ ಶಿಖರದಿಂದ ಕೆಳಗೆ ನೋಟ ಬಿರಿದಾಗ ಎದೆ ಹಾರುವಂತೆ, ಅಲ್ಲಿ ನಮಗೆ ಭೀತಿಯೆನಿಸಬಹುದಾದ್ದರಿಂದ ಮೊದಲು ಧೀರರೂ ವೀರರೂ ಗಂಭೀರರೂ ಆಗಬೇಕಾಗು ವುದು! ಮೇಘರಾಜನನ್ನು ಜೆಟ್ಟಿಯಾಗಿ ಬರುವೆನು, ಆಮೇಲೆ ಮುಂದಿನದರ ನಿರ್ಣಯ ಮಾಡುವಾ!''

ಅಧೀರ ಮನಸ್ಸಿನ, ಬಾಲಿಶ ಸ್ವಭಾವದ ತರಂಗಗಳಿಗೆ ಸಮೀರನ ಸೂಚನೆಯು ಮೇರೆಗೆ ಸಾವಕಾಶವಾಗಿ, ಸಾವಧಾನ ವಾಗಿ ಹೋಗುವ ವಿಚಾರವು ಸ್ಥಿರಿಸದಾಯಿತು. ಮೇಲಕ್ಕೆ ಹೋಗುವ ಮಾರ್ಗವನ್ನು ತಾವೇ ಹುಡುಕುವುದಾಗಿ ಅವು ನಿರ್ಧರಿಸಿದವು. ಪ್ರಯತ್ನಾಂತದಲ್ಲಿ ಫಲವು ದೊರೆಯುತ್ತ ದೆಂಬ ಧೈರ್ಯದಿಂದ ತರಂಗಗಳು ಸಮೀರನ ಜೊತೆಯಲ್ಲಿ ಧಾವಿಸತೊಡಗಿದವು. ಎಷ್ಟೊಂದು ಧಾವಿಸಿದರೂ ಎಲ್ಲಕಡೆಗೂ ದಂಡೆಯೇ ಹತ್ತುತ್ತಿತ್ತು. ಆಶೆಯಿಂದ ಧಾವಿಸಿ ದಂಡೆಗೆ ಅಪ್ಪಳಿಸುವುದು, ಅಲ್ಲಿಂದ ಮರಳಿ ಇನ್ನೊಂದೆಡೆಗೆ ಓಡಿದರೆ ಅಲ್ಲಿ ಮತ್ತೊಂದು ಕಲ್ಲುಬಂಡೆಗೆ ತಾಕುವುದು—ಹೀಗೆ ಎಷ್ಟೇ

ಧಾವಿಸಿದರೂ ಚತುರ್ದಿಶೆಗಳೆಲ್ಲ ಮುಗಿದವು; ಆದರೆ ತರಂಗ ಗಳಿಗೆ ಮೇಲಕ್ಕೇರಲು ಮಾರ್ಗ ದೊರೆಯಲಿಲ್ಲ.

ಉಚ್ಚಕುಲೋತ್ಪನ್ನ ಸಮೀರನು ತನ್ನ ಉಚ್ಚಕುಲದ ಗೌರವವನ್ನು ಕಾಯ್ದುಕೊಂಡಿದ್ದನು. ಸರಸ ಸಜ್ಜನಿಕೆಯು, ಸುಸಂಸ್ಕೃತಿಯು, ಸುಸಂಪನ್ನತೆಯ ಛಾಯೆಯು ಕುಲಶೀಲ ಯುತ ಲಕ್ಷ್ಮೀಪುತ್ರನ ಮುಖದ ಮೇಲೆ ವಿಲಸಿಸುತ್ತಿದ್ದು, ತನ್ನ ಅಭಿಜಾತ ಗುಣಗಳಿಗನುಸಾರವಾಗಿಯೇ ಅವನು ನಡೆಯು ತ್ತಿರುವಂತೆ, ಸಮೀರನು ಅಷ್ಟಕೋನವುಳ್ಳ ಅಮೌಲ್ಯರತ್ನ ದಂತಿದ್ದನು. ಷಡ್ವಿಕಾರಗಳನ್ನು ತನ್ನಾಜ್ಞೆಯಲ್ಲಿರಿಸಿ, ಅವುಗಳ ಸ್ವಾಮಿಯಾಗಿ ಮೆರೆಯುವ ವೀರನಂತೆ ಆತನಿದ್ದರೂ ಒಮ್ಮೊಮ್ಮೆ ಅವನು ತನ್ನ ಮನೋಲಹರಿಯಂತೆಯೂ ನಡೆಯುತ್ತಿದ್ದನು. ಶಾಂತತೆಯನ್ನು ನೋಡಿ ಶಾಂತನಾಗುವುದು, ಅಶಾಂತತೆ ಯನ್ನು ನೋಡಿ ಅಶಾಂತನಾಗುವುದು—ಹೀಗೂ ಆತನ ಮನಸ್ಸಿನಲ್ಲಿ ನಡೆಯುತ್ತಿತ್ತು. ಕೃತ್ರಿಮತೆಯಿಂದ ಹೆರರ ಕಣ್ಣಲ್ಲಿ ಮಣ್ಣೆರಚುವ ಭೂಮಿಯ ಮೇಲಿನವರ ಕಸಬು ನೋಡಿ, ಒಮ್ಮೊಮ್ಮೆ ಸಮೀರನಾದರೂ ಸಿಟ್ಟಿನಿಂದ ಸಿಡಿಪೆದ್ದು, ಎಲ್ಲಿ ನೋಡಿದಲ್ಲಿ ಧೂಳಿಯೆಬ್ಬಿಸಿ ಅಲ್ಲೋಲಕಲ್ಲೋಲವಾಗು ವಂತೆ ಮಾಡುತ್ತಿದ್ದ! ಒಮ್ಮೊಮ್ಮೆ ಶಾಂತಶೀಲನೂ ಇನ್ನೊಮ್ಮೆ ಗಂಭೀರನೂ ಆಗಿರುವ ಸಮೀರನು ಮತ್ತೆ ಎಂದಾದರೊಮ್ಮೆ ಉಗ್ರರೂಪವನ್ನೂ ಧರಿಸುತ್ತಿದ್ದನು.

ಈಚೆಗೆ ತರಂಗಗಳ ಲಕ್ಷ್ಯವೆಲ್ಲ ಮೇಘರಾಜನ ಕಡೆಗೇ ಇದ್ದಿತು. ಎತ್ತರವಾದ ಮಂಟಪದ ಮೇಲೆ ರಸದುಂಬಿದ ದ್ರಾಕ್ಷೆಗಳ ಗೊಂಚಲುಗಳು ತೂಗುತ್ತಿರುವುದನ್ನು ಭೂಮಿಯ ಮೇಲೆ ನಡೆಯುವ ನರಿಯು ಆಶೆಯಿಂದ ನೋಡುವಂತೆ ಅದಕೂ

ಹೆಚ್ಚಿನ ಆಶೆಯಿಂದ ತರಂಗಗಳು ಮೇಲಕ್ಕೆ ನೋಡುತ್ತಿದ್ದವು. ಒಂದು ದಿನ ಬಾನಿನಲ್ಲಿ ಶುಭ್ರಮೇಘಗಳು ಗಂಭೀರ ಗತಿಯಿಂದ ಮುಂದಕ್ಕೆ ನಡೆದಿದ್ದವು. ಅದನ್ನು ನೋಡಿ ಮನೋರಾಜ್ಯದಲ್ಲಿ ಮಗ್ನವಾಗಿದ್ದ ತರಂಗಗಳು ಎಂದುಕೊಂಡವು–"ಸಮೀರದೇವನ ಹೇಳಿಕೆಯಿಂದ ನಮ್ಮ ಸ್ವಾಗತದ ಸಿದ್ಧತೆ ನಡೆಯಿಸಿದ ಮೇಘ ರಾಜ್ಯದಲ್ಲಿ ಗಡಿಬಿಡಿಯೇ ಎದ್ದಿರಲು ಸಾಕು." ಅವುಗಳಿಗೆ ಹೇಗೊ ಅನಿಸುತಿತ್ತು—'ಮೇಘರಾಜನ ಆಜ್ಞೆಯಿಂದ ಯಾವ ನಾದರೊಬ್ಬ ಮೇಘಗಳ ಸೇನಾನಿ ಕೆಳಗಿಳಿದು ಕೈ ಹಿಡಿದು ತಮ್ಮನ್ನು ಮೇಲಕ್ಕೆತ್ತಿಕೊಳ್ಳಬಹುದೆ'ಂದು. ಮೇಘಗಳ ಚಲನ ವಲನೆಯಲ್ಲಿ ತರಂಗಗಳಿಗೀಗ ಏನೋ ಹೊಸಹೊಸದು ಎನಿಸ ತೊಡಗಿತು. ಹುಚ್ಚು ಆಶೆಯು ಕಲ್ಪನೆಯನ್ನು ಚಿಗುರಿಸು ತ್ತಿತ್ತು, ಕಲ್ಪನೆಯು ಪಸರಿಸಿ ಸುತ್ತ ಕೈ ಚಾಚುತ್ತಿತ್ತು. ಕಲ್ಪನಾ ಸಾಮ್ರಾಜ್ಯದಲ್ಲಿಯೆ ತರಂಗಗಳು ದಿನಗಳೆಯುತೊಡಗಿದವು.

ಮೇಘರಾಜ್ಯಕ್ಕೆ ಹೋಗಿ ಸಮೀರನು ಮೇಘರಾಜನನ್ನು ಸಂದರ್ಶಿಸಿದನು. ಆ ಈ ಮಾತಾದ ಮೇಲೆ ತರಂಗಗಳ ಬಗ್ಗೆ ಸಮೀರನು ಮಾತಿಗೆ ಮೊದಲುಮಾಡಿದನು. ಸಮೀರನು ಹೇಳಿದುದನ್ನೆಲ್ಲ ಕೇಳಿಕೊಂಡು, ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ವ್ಯಕ್ತಗೊಳಿಸದ ಒಬ್ಬ ದೊಡ್ಡ ವ್ಯಕ್ತಿಯು 'ಹೂಂ' ಸೂಚಿಸುವ ರೀತಿಯಲ್ಲಿ ಗಂಭೀರವಾಗಿ, ಕಿಂಚಿತ್ತಾಗಿ ಗೋಣು ಹಾಕುವಂತೆ ಮೇಘರಾಜನು ತಲೆಯುಲ್ಲಾಡಿಸಿದನು. ಕುತೂಹಲವನ್ನಾಗಲಿ, ಆಶ್ಚರ್ಯವನ್ನಾಗಲಿ ತೋರಗೊಡದೆ, ಸಹಜ ಸ್ವಾಭಾವಿಕ ಪ್ರಸನ್ನತೆಯನ್ನು ತಳೆದಿದ್ದನು. ಆ ಪ್ರಸನ್ನತೆಯನ್ನು ನೋಡಿ ಸಮೀರನು ಸಹರ್ಷನಾಗಿ ಮರಳಿದನು.

ಸೂರ್ಯದೇವನು ಪ್ರಸನ್ನವದನದಿಂದ ಭೂಪ್ರದೇಶವನ್ನು ಅವಲೋಕಿಸುತ್ತಿದ್ದನು. ಚಕಚಕನೆ ಮಿನುಗುವ ಅವನ ಕೋಮಲ ಕಿರಣಗಳು ಎಲ್ಲೆಡೆಗೂ ಪಸರಿಸಿದ್ದವು. ಕೆಲವು ಕಿರಣಗಳು ಸಾಗರದತ್ತ ಹೊರಳಿದವು. ಪ್ರೇಮಭರದಿಂದ ಆ ರಶ್ಮಿಗಳು ತರಂಗಗಳೊಡನೆ ಹಸ್ತಾಂದೋಲನಗೈದವು. ರಶ್ಮಿಗಳ ತೇಜಸ್ವಿಸ್ಪರ್ಶದಿಂದ ತರಂಗಗಳು ಉತ್ತೇಜಿತವಾಗಿ, ತುಂಬ ಆಶಾಯುಕ್ತ ದೃಷ್ಟಿಯಿಂದ ರಶ್ಮಿಗಳತ್ತ ದೃಷ್ಟಿ ಬೀರಿದವು. ಚತುರರಶ್ಮಿಗಳು ತರಂಗಗಳ ಮನಸ್ಸಿನಲ್ಲಿ ಯಾವುದೋ ಭಾವ ಅಡಗಿರುವುದನ್ನು ತಿಳಿದುಕೊಂಡವು. ರಶ್ಮಿಗಳೆಂದವು— "ತರಂಗಗಳೇ, ಯಾವ ಆಶೆಯು ಸುತ್ತ ಜಾಲ ನೇಯುತ್ತಿರುವಿರಿ?" ರಶ್ಮಿಗಳು ತಮ್ಮ ಮನದ ಬಯಕೆಯ ಗುರುತು ಹಿಡಿದುದನ್ನು ನೋಡಿ ತರಂಗಗಳು ವಿಸ್ಮಿತವಾದವು. ಮತ್ತು ತಮ್ಮ ಆಶೆಯನ್ನು ಮುಕ್ತ ಮನಸ್ಸಿನಿಂದ ರಶ್ಮಿಗಳೆದುರಿನಲ್ಲಿ ಮಂಡಿಸಿದವು - ''ಅಣ್ಣಗಳಿರಾ! ಮೇಘರಾಜ್ಯಕ್ಕೆ ಹೋಗಬೇಕೆಂಬ ನಮ್ಮಾಸೆಯು ಸಫಲವಾದೀತೇ? ನಾವು ಹೆಣಗಿಹೆಣಗಿ ದಣಿದು ಹೋಗಿರುವೆವು. ಪ್ರಯತ್ನಾಂತದಲ್ಲಿ ಫಲವೆಂಬ ಮಾತಿನಲ್ಲಿ ನಮ್ಮ ವಿಶ್ವಾಸವುಳಿದಿಲ್ಲ. ಒಂದೂ ದಿಕ್ಕನ್ನು ಬಿಡದೆ ಎಲ್ಲ ದಿಕ್ಕುಗಳಲ್ಲಿಯೂ ನಾವು ಧಾವಿಸಿಧಾವಿಸಿ ತಿರುಗಿಬಂದಿರುವೆವು. ಆದರೂ ಮೇಘರಾಜ್ಯದಲ್ಲಿಗೆ ಹೋಗಲು ಮಾರ್ಗವೇ ದೊರೆತಿಲ್ಲ. ನೀವು ಎಂದಾದರೂ ಮೇಘರಾಜ್ಯಕ್ಕೆ ಹೋಗಿರುವಿರಾ? ನಾವೂ ನಿಮ್ಮೊಡನೆ ಬರೋಣವೇ?...." ತರಂಗಗಳು ರಶ್ಮಿಗಳ ಮೇಲೆ ಪ್ರಶ್ನೆಗಳ ಸುರಿಮಳೆಗರೆದವು.

ಅಧೀರ ತರಂಗಗಳಿಗೆ ಹೊಟ್ಟೆತುಂಬ ಮಾತನಾಡಲು ಅವಕಾಶ ಕೊಟ್ಟು, ಸುಜ್ಞರಶ್ಮಿಗಳು ಎಲ್ಲ ಪ್ರಶ್ನೆಗಳಿಗೂ ಒಂದೇ

ಉತ್ತರ ಕೊಟ್ಟುಬಿಟ್ಟವು—"ಹೋ! ನಿಮ್ಮ ಇಚ್ಛೆ ಈಡೇರೀತು! ಮೇಘರಾಜ್ಯಕ್ಕೆ ಹೋಗುವ ನಿಮ್ಮ ಇಚ್ಛೆ ಇಷ್ಟು ತೀವ್ರ ವಾಗಿರುವಾಗ ಅದು ಸಫಲವಾಗದೆ ಹೇಗೆ ಉಳಿದೀತು? ಬಿಟ್ಟ ಬಾಣ ಮರಳಿ ಬಾರದಂತೆ, ಹೊರಟ ಉದ್ಗಾರ ತಿರುಗಿ ಬಾರದಂತೆ ತೀವ್ರ ಇಚ್ಛೆಯು ಎಂದೂ ವಿಫಲವಾಗಲಾರದು."

ಧೈರ್ಯಗೊಂಡು ತರಂಗಗಳೆಂದವು— "ಹಾಗಿದ್ದಲ್ಲಿ ನಾವಿಷ್ಟು ಪ್ರಯತ್ನಿಸಿಯೂ ನಮಗೇಕೆ ಯಶ ದೊರೆಯಲಿಲ್ಲ?"

ರಶ್ಮಿಗಳೆಂದವು— "ಇಚ್ಛೆಯ ಮೇರೆಗೆ ಸರಿಯಾಗಿ ಪ್ರಯತ್ನಿಸಿದರೆ ಫಲ ದೊರೆಯುತ್ತದೆ. ಹೊಲದಲ್ಲಿ ಹುಲಸಾಗಿ ಬೆಳೆದ ಬೆಳೆಯನ್ನು ಕೊಯ್ಯಬೇಕಾಗಿದ್ದಲ್ಲಿ ಅಡಿಗೆಮನೆಯ ನೆಲ ಬಡಿದರೇನು ಫಲ? ನಿಮ್ಮ ಪ್ರಯತ್ನವೂ ಅದೇ ಮಾದರಿಯದಾ ನಿತು. ನಿಮಗೆ ಹೋಗಬೇಕಾಗಿದೆ ಮೇಲಮೇಲಕ್ಕೆ, ಆದರೆ ನೀವು ಧಾವಿಸುವದು ಇಲ್ಲಿ ನಿಮ್ಮ ವಲಯದಲ್ಲಿ! ಈ ಓಟದ ಪಂದ್ಯದಲ್ಲಿ ನೀವು ಮೇಘರಾಜ್ಯಕ್ಕೆ ಹೋಗುವುದು ಹೇಗೆ? ಧ್ಯೇಯಾನುಸಾರವಾಗಿ ಮಾರ್ಗ ಹುಡುಕಿತೆಗೆದು, ಜಿಗಟುತನದಿಂದ ಅದನ್ನು ಹಿಡಿದು ಮುನ್ನಡೆಯುವುದೇ ಪ್ರಯತ್ನದಲ್ಲಿಯ ಸಾಫಲ್ಯದ ಗುಟ್ಟು. ನಾವು ಆನಂದದಿಂದ ನಿಮಗೆ ನಮ್ಮ ಸಹಕಾರ ನೀಡುವೆವು."

ಮೇಘರಾಜ್ಯಕ್ಕೆ ತಾವು ಹೋಗುವಲ್ಲಿ ರಶ್ಮಿಗಳ ಸಹಾಯ ದೊರೆಯುವ ಶುಭ ವರ್ತಮಾನವನ್ನು ತರಂಗಗಳು ಸಮೀರನಿಗೆ ಉಸುರಿದವು. ಎಲ್ಲ ನೋಡಿ, ಎಲ್ಲ ಕೇಳಿ, ಎಲ್ಲ ತಿಳಿದುಕೊಂಡು, ಸಮೀರನು ನಗುಮೊಗದಿಂದಿದ್ದನು. ಆ ನಗೆಯಲ್ಲಿ ಅರ್ಥ ತುಂಬಿತ್ತು.

ಸೂರ್ಯನಾರಾಯಣನು ದೈದೀಪ್ಯಮಾನವಾಗಿ ಪ್ರಕಾ

ಶಿಷುತ್ತಿದ್ದನು. ಸೂರ್ಯನ ಪ್ರಖರ ಕಿರಣಗಳು ತರಂಗಗಳಿಗೆ ತಾಕಿದವು. ಪ್ರಖರ ಉಷ್ಣತೆಯಿಂದ ತರಂಗಗಳು ಕಾದು ಹೋದವು. ಅವುಗಳ ತರಂಗರೂಪವು ಹೋಗಿ, ಅವು ವಿರಲವಾದ ಬಾಷ್ಪರೂಪವನ್ನು ಹೊಂದಿದವು; ಹಾಗೂ ಮೇಲ ಮೇಲಕ್ಕೇರತೊಡಗಿದವು. ಬಾಷ್ಪರೂಪದೊಳಗಿಂದ ತರಲಮೇಘ ರೂಪವನ್ನು ಧರಿಸಿದವು. ಮೇಘಗಳಿಂದ ಪರ್ಜನ್ಯರೂಪವಾಗಿ, ಪರ್ಜನ್ಯದಿಂದ ಜಲರೂಪವಾಗಿ ಸಾಗರದೊಳಗಿಳಿದವು.

ತರಂಗಗಳು ತರಂಗರೂಪವಾಗಿರುವಾಗ ಸಮೀರನ ಜೊತೆಗೆ ತಮ್ಮ ಪರಿಘದಲ್ಲಿಯೇ ಧಾವಿಸುವು ಅವುಗಳ ಕಾಲ ಕ್ರಮಣವಾಗಿತ್ತು. ತರಂಗಗಳಿಗೆ ವಿರಲವಾದ ಬಾಷ್ಪರೂಪವು ಪ್ರಾಪ್ತವಾದ ಮೇಲೆ, ರಶ್ಮಿಗಳೊಡನೆ ಮೇಲಮೇಲಕ್ಕೆ ಅಂತರಿಕ್ಷದೊಳಗೇರುವುದು ಅವುಗಳ ಕಾಲಕ್ರಮಣವಾಯಿತು. ವಿರಲ ಬಾಷ್ಪರೂಪಕ್ಕೆ ತರಲ ಮೇಘರೂಪವು ಪ್ರಾಪ್ತವಾದ ಮೇಲೆ ಆಕಾಶದಲ್ಲಿ ತೇಲುವುದು ಅವುಗಳ ಕಾಲಕ್ರಮಣವಾಯಿತು. ತರಲ ಮೇಘಗಳು ಪರ್ಜನ್ಯವಾದ ಮೇಲೆ ಜಲರೂಪದಿಂದ ವರ್ಷಿಸುವುದು ಅವುಗಳ ಕಾಲಕ್ರಮಣವಾಯಿತು.

ಈ ರೂಪಾಂತರದೊಳಗಿಂದ, ಬೇರೆಬೇರೆ ಸ್ಥಿತ್ಯಂತರಗಳೊಳಗಿಂದ ಜಲವು ಮತ್ತೆ ಜಲರೂಪದಲ್ಲಿ ಐಕ್ಯ ಹೊಂದಿತು. ತರಂಗಗಳು ಬಾಷ್ಪರೂಪ ಹೊಂದಿದ ಮೇಲೆ ತಮ್ಮ ತರಂಗ ರೂಪವನ್ನು ಮರೆತುಬಿಟ್ಟವು. ಮೇಘರೂಪ ಹೊಂದಿದ ಮೇಲೆ ಅವು ತಮ್ಮ ಬಾಷ್ಪರೂಪವನ್ನು ಮರೆತುಬಿಟ್ಟವು. ಪರ್ಜನ್ಯರೂಪ ಹೊಂದಿದ ಮೇಲೆ ತಮ್ಮ ಮೇಘರೂಪವನು. ಮರೆತುಬಿಟ್ಟವು. ಜಲವು ಜಲರೂಪದಲ್ಲಿ ಕೂಡಿಹೋದ ಮೇಲೆ ತನ್ನ ಪರ್ಜನ್ಯರೂಪವನ್ನು ಮರೆತುಬಿಟ್ಟಿತು.

ಶಾಂತಸಾಗರದ ತಳಕ್ಕೆ ಪರ್ಜನ್ಯವೃಷ್ಟಿಯಲ್ಲಿಯ ಜಲವು ಹೋಗಿಮುಟ್ಟಿತು. ಅಲ್ಲಿಯ ನಿಶ್ಚಲತೆಯಲ್ಲಿ ತರಂಗಗಳಿಗೆ ತಮ್ಮೆಲ್ಲ ರೂಪಾಂತರಗಳು, ಸ್ಥಿತ್ಯಂತರಗಳು ಸ್ಪಷ್ಟವಾಗಿ ತೋರತೊಡಗಿದವು.

ಬುದ್ಬುದಗಳಿರದ ಶಾಂತಜಲದಂತೆ, ವೃತ್ತಿರಹಿತ ಅಚಲ ಮಾನಸದಂತೆ ಓಟ ಮುಗಿದ ತರಂಗಗಳು, ಜಲರೂಪವಾದ ತರಂಗಗಳು ಸಾಗರದ ತಲದಲ್ಲಿರುವ ನಿತಾಂತ ಶಾಂತಿಯ ಅನುಭವದಲ್ಲಿ ತಮ್ಮ ಜಲರೂಪವನ್ನು ಮರೆತುಬಿಟ್ಟವು.

# ಮಾಟಗಾರ



ಕತೆ ಓದುವುದರಲ್ಲಿ, ಕೇಳುವುದರಲ್ಲಿ ನನಗೆ ಆಸಕ್ತಿ ಬಹಳ. ಹೊಟ್ಟೆತುಂಬ ಮಿಷ್ಟಾನ್ನ ಭೋಜನವಾಗಿದ್ದರೂ ತಾಂಬೂಲಭಕ್ತನಿಗೆ ತಾಂಬೂಲವಿಲ್ಲದೆ ಎಂತು ಏತರದೊ ಕೊರತೆಯೆನಿಸುವುದೋ ಹಾಗೆ ನನಗೆ ಕತೆ ಓದಲು ಇಲ್ಲವೆ ಕೇಳಲು ದೊರೆಯದಿದ್ದರೆ ಆಗುತ್ತಿತ್ತು. ಇಲಿಗಳು ಧಾನ್ಯಗಳ ಚೀಲಗಳನ್ನೊಡೆದು, ಡಬ್ಬಿಗಳನ್ನು ಕೆಡವಿ, ಮುಚ್ಚಳ ತೆಗೆದು ತಮ್ಮ ಹಸಿವು ಹಿಂಗಿಸಿಕೊಳ್ಳುವಂತೆ, ನಾನು ಎಲ್ಲಿಂದಲಾದರೂ ಪುಸ್ತಕಗಳನ್ನು ಶೋಧಿಸಿ ತೆಗೆದು, ಒಂದಾದರೂ ಕತೆಯ ಪುಸ್ತಕವನ್ನು ಸಂಪಾದಿಸಿಯೇ ತೀರುತ್ತಿದ್ದೆ! ಗೋಡೆಯೊಳಗಿನ ಮಾಡದಲ್ಲಿ ನನಗಿಂದು ಗೆದ್ದಲು ಹತ್ತಿದ ಮೋಜು ಮೋಜಿನ ಕತೆಗಳ ಪುಸ್ತಕ ಸಿಕ್ಕಿತು. ಅದರ ಮೇಲಿನ ಕಸವನ್ನೆಲ್ಲಾ ಒರೆಸಿ, ಸ್ವಚ್ಛಮಾಡಿ, ಅದರ ಹಸಿ ಆರಲೆಂದು ಬಿಸಿಲಲ್ಲಿಟ್ಟೆ. ಅದು ಓದಲಿಕ್ಕೆ ತಕ್ಕುದಾದೊಡನೆ ನಾನು ಒಳಗೆ ಬಂದೆ. ನಡುಮನೆಯಲ್ಲಿ ಚಾಪೆ ಹಾಸಿ, ಅದರ ಮೇಲೆ ಒರಗಿ, ಕತೆಯೋದಲು ತೊಡಗಿದೆ. ಪಿತಾಪುತ್ರರ ಕತೆಯೋದಿದೆ, ಹೂ-ಹಸುಳೆಗಳ ಕತೆಯೋದಿದೆ, ಮೂರನೆಯದಾದ ತರಂಗಿಣಿ-ಸಾಗರರ ಕತೆಯನ್ನೋದಲು ಮೊದಲುಮಾಡಿದೆ. ತರಂಗಿಣಿಯ ಜನ್ಮವು ಎತ್ತರವಾದ ಬೆಟ್ಟದ ಮೇಲೆ ಆಗುತ್ತದೆ; ತರುವಾಯ ಅವಳು ಬಾಲ್ಯಸಹಜವಾದ ಆಟ-ನೋಟಗಳಲ್ಲಿ ತೊಡಗಿರುವಳು. ಆಮೇಲೆ ತಿಳಿವಳಿಕೆಯುಂಟಾಗಿ ಸೌಜನ್ಯದ ಪುತ್ತಳಿಯಾಗುವಳು ಹಾಗೂ ಜಗತ್ತಿನ ಸೌಂದರ್ಯ ನೋಡಲು ಹೊರಡುವಳು. ಅವಳ ಮಿತ್ರ ಸಮೀರನು ಅವಳೆದುರಿ

ನಲ್ಲಿ ಸಾಗರನ ವಿಶಾಲತೆಯ, ಔದಾರ್ಯದ ಪ್ರಶಂಸೆಯನ್ನು ಮುಕ್ತಕಂಠದಿಂದ ಮಾಡುವನು; ಆ ವರ್ಣನೆ ಕೇಳಿ, ಉದಾತ್ತ ಸಾಗರನ ಭೆಟ್ಟಿಗಾಗಿ ಉತ್ಕಂಠಿತಳಾಗಿ ಅವನ ಕಡೆಗೆ ಧಾವಿಸುತ್ತಿರುವಳು. ಅವಳು ತಪ್ಪದೆ ಹೆಜ್ಜೆಯಿಡು ವಳು. .... .... ಇಷ್ಟರ ವರೆಗೆ ನಾನು ಕತೆಯನ್ನೋದಿದೆ; ಅಷ್ಟರಲ್ಲಿ ಜಂಪು ಬರತೊಡಗಿತು. ನಾನು ಪ್ರಯತ್ನಪೂರ್ವಕ ವಾಗಿ ಮುಂದೆ ಮುಂದೆ ಓದಹತ್ತಿದೆ; ಆದರೆ ಅರ್ಥಬೋಧವು ಆಗಲೊಲ್ಲದು. ಕತೆಯ ಕಡೆಗಿನ ನನ್ನ ಲಕ್ಷ್ಯವನ್ನು ನಿದ್ದೆ ಸೆಳೆದುಕೊಂಡು ಬಿಟ್ಟಿತು. ಓದಬೇಕೆಂಬ ನನ್ನಿಚ್ಛೆಯನ್ನು ನಿದ್ದೆ ಕೇಳಲೊಲ್ಲದು. ನಿದ್ದೆಯ ಮೇಲೆ ನನಗೆ ಸಿಟ್ಟು ಬಂದಿತು. ನಿದ್ದೆಯೊಡನೆ ಎರಡು ಕೈ ಮಾಡಬೇಕೆಂದಿದ್ದೆ, —ಆದರೆ ನಿದ್ದೆ ನನ್ನ ಮೇಲೆ ತನ್ನ ಪ್ರಭುತ್ವ ನಡೆಸಿಬಿಟ್ಟಿತ್ತು. ಸೋತು ಹೋದ ಮೇಲೆ ಸುಮ್ಮನೆ ಗುರುಗುಟ್ಟಿ ಪ್ರಯೋಜನವೇನು? ಕಲ್ಪನೆಯಲ್ಲಿಯ ಪರಾಕ್ರಮದ ಉಪಯೋಗವೇನು? ನಿದ್ರೆ ಪೂರ್ತಿಯಾಗಿ ನನ್ನನ್ನಾವರಿಸಿತು, ನನ್ನ ಕೈಯೊಳಗಿನ ಪುಸ್ತಕ ಕಳಚಿಬಿದ್ದಿತು.

ತರಂಗಿಣಿಯ ಮುಂದಿನ ಕಥಾಭಾಗವನ್ನು ನನಗೆ ಕೇಳು ವುದಿತ್ತು. ಬಿಸಿಲು ಭಯಂಕರವಾಗಿತ್ತು; ಆದರೂ ನಾನು ನದಿಯ ಉಗಮದತ್ತ ಧಾವಿಸುತ್ತ ಹೋದೆ. ಇಷ್ಟಾದರೂ ಕಾಲು ಸುಡಲಿಲ್ಲ, ನೆತ್ತಿ ಕಾಯಲಿಲ್ಲ. ಅಧೀರ ಬಾಲಿಕೆಯಂತೆ ನಾನು ತರಂಗಿಣಿಯ ಶೋಧವನ್ನು ಅಲ್ಲಿ ಇಲ್ಲಿ ಮಾಡತೊಡ ಗಿದೆ. ಅಷ್ಟರಲ್ಲಿ ತರಂಗಿಣಿ ನನ್ನೆದುರಿನಲ್ಲಿಯೆ ಹರಿಯುತ್ತಿರು ವುದು ಕಂಡುಬಂದಿತು. ಒಂದೇ ಕ್ಷಣದಲ್ಲಿ ನಾನಲ್ಲಿಗೆ ತಲು ಪಿದೆ. ಒಬ್ಬ ಗೆಳತಿಯ ಹಾಗೆ ನಾನು ನಗೆಮೊಗದಿಂದ ಆಕೆಗೆ

ಕೇಳಿದೆ— “ ತರಂಗಿಣೀ ! ನೀನು ಒಂಟೊಂಟಿಗಳಾಗಿಯೇ ಹರಿಯುತ್ತಿರುವಿಯಾ ? ನಿನ್ನ ಆ ಸಾಗರನು ನಿನ್ನ ಜೊತೆಯ ಲ್ಲಿಲ್ಲವೇ ? ” ತರಂಗಿಣಿ ನನ್ನ ಕಡೆಗೆ ಆಶ್ಚರ್ಯದಿಂದ ನೋಡ ತೊಡಗಿದಳು. ನಾನು ಮತ್ತೆ ಕೇಳಿದೆ— “ ನಿನ್ನ ಸಾಗರ ನೆಲ್ಲಿರುವ ? ನೀನು ಆತನ ಬೆಟ್ಟಿಗಾಗಿ ಹೋಗುತ್ತಿರುವಂತೆ, ನಿನ್ನ ಸಾಗರನಾದರೂ ನಿನ್ನ ಬೆಟ್ಟಿಗೆ ಬರುತ್ತಿರುವನೇ ? ” ತರಂಗಿಣಿಯು ಅರ್ಥಪೂರ್ಣವಾಗಿ ಸ್ಮಿತಮಾಡಿ ಎಂದಳು— “ ಸಾಗರನು ತರಂಗಿಣಿಯೆಡೆಗೆ ಎಂತು ಬರುವ ? ಸಾಗರನು ಧೀರಗಂಭೀರನು, ಅಪಾರನು. ತನ್ನ ಪ್ರದೇಶದ ಸ್ವಾಮಿಯು. ತನ್ನ ಪ್ರಾಂತದ ಹೊರಗೆ ಆತನು ಹೇಗೆ ಹೋಗಿಯಾನು ? ” ನಾನು ಔತ್ಸುಕ್ಯದಿಂದ ಕೇಳಿದೆ— “ ಆತನು ಎಲ್ಲಿರುವ ? ” ತರಂಗಿಣಿಯೆಂದಳು— ‘ ದೂರದಲ್ಲಿ. ” ನಾನು ಬೆಸಗೊಂಡೆ — “ ಈ ದೂರದ ದಾರಿ ನಿನಗೆ ತೋರಿದರಾರು? ” ತರಂಗಿಣಿ ಯೆಂದಳು— “ ವರ್ಷಿಸುವ ಪರ್ಜನ್ಯಕ್ಕೆ ಭೂಮಿಯತ್ತ ಬರುವ ದಾರಿಯನ್ನು ಯಾರು ತೋರುವರು ? ಗಿಡದ ಮೊಳ ಕೆಗೆ ನೆಲದ ಹೊರಗೆ ತಲೆ ತೆಗೆದು ಎತ್ತರ ಬೆಳೆಯಲು ಯಾರು ಕಲಿಸುವರು ? ಸುಗಂಧಕ್ಕೆ ಸುತ್ತ ಪಸರಿಸಲು ಯಾರು ಹೇಳುವರು ? ” ನಾನು ಕೇಳಿದೆ— “ ನೀನು ತುಸುವೂ ತಪ್ಪದೆ ದಾರಿ ತೆಗೆಯುತ್ತಿರುವೆಯಂತೆ—ಅಲ್ಲವೇ? ” ತರಂಗಿಣಿ ಯೆಂದಳು— “ ಅಹುದು ! ನಿಶ್ಚಯದಿಂದ, ನಿರ್ಧಾರ ದಿಂದ, ಶುದ್ಧಭಾವದಿಂದ ಮುಂದೆ ಹೆಜ್ಜೆಯಿಡುವುದು ಸಂಕಲ್ಪ ಸಿದ್ಧಿಯ ರಹಸ್ಯ. ಇದನ್ನರಿತುಕೊಂಡು ನಾನು ಮುಂದಕ್ಕೆ ನಡೆದಿರುವೆ. ”

ನಾನು ತರಂಗಿಣಿಗೆಂದೆ— “ ನೀನು ಮುಂಚೆ ಎಂದಿ



ಗಾದರೂ ಸಾಗರನಿಗೆ ಭೆಟ್ಟಿಯಾಗಿದ್ದೆಯಾ? ಇಲ್ಲವೆ ಇಂದೇ ಪ್ರಥಮವಾಗಿ ಅವನ ದರ್ಶನಕ್ಕೆ ಹೊರಟಿರುವೆಯಾ?" ಗಂಭೀರ ಮುದ್ರೆಯಿಂದ ತರಂಗಿಣಿ ನನ್ನನ್ನು ನೋಡುತ್ತ ಎಂದಳು— "ಮಗು! ಸಾಗರನ ಭೆಟ್ಟಿಯಾಗುವ ಪೂರ್ವದಲ್ಲಿಯೇ ನಾನು ಈ ರೀತಿ ಧಾವಿಸುವುದು! ಸಾಗರನ ಭೆಟ್ಟಿಯಾಯಿತೆಂದರೆ ಸಾಗರಸಮವಾದ ಧೀರಗಂಭೀರ ರೂಪವು ನನಗೆ ಪ್ರಾಪ್ತವಾದೀತು. ಸಾಗರನ ಭೆಟ್ಟಿಯಾದ ಮೇಲೆ ಸ್ವತಂತ್ರವಾಗಿ ನಾನೆಂತು ಧಾವಿಸಬಲ್ಲೆ?"

ಸಾಗರನ ವರ್ಣನೆ ಕೇಳಿ ಜಿಜ್ಞಾಸೆಯಿಂದ ಸಾಗರನನ್ನು ನೋಡಲು ನಾನು ತರಂಗಿಣಿಯೊಡನೆ ಹೊರಟೆ. ನಾವು ತುಂಬಾ ದೂರ ಹೋದೆವು— ಆ ಮುಂದೆ ಸುತ್ತಲೂ ಅಪರಂಪಾರವಾಗಿ ಹಬ್ಬಿದ ಸಾಗರನು ತೋರಿದನು. ನನ್ನ ಕಡೆಗೆ ನೋಡುವ ಭಾನವೂ ತರಂಗಿಣಿಗೆ ಉಳಿಯಲಿಲ್ಲ. ಅವಳು ಸಾಗರನೊಡನೆ ಸಾಗರರೂಪಳಾದಳು. ನನಗೆ ತರಂಗಿಣಿಯ ಕಣ್ಣಿನಿಂದ ಸಾಗರನನ್ನು ನೋಡುವುದಿತ್ತು. ಆಕೆಯ ಕಣ್ಣಿಗೆ ಕಾಣುವ ಸಾಗರನ ಸದ್ಗುಣಸಂಪನ್ನ ರೂಪವನ್ನು ನನಗೆ ನೋಡುವುದಿತ್ತು. ಅವಳ ಕಣ್ಣಿಗೆ ಕಾಣುವ ಅದ್ವಿತೀಯ ಸಾಗರ ಸ್ವರೂಪವು ನನ್ನ ಕಣ್ಣಿಗೆ ಎಂತು ಕಾಣುವುದು? ನನಗೆ ಸಾಗರನು ಪ್ರಚಂಡ ಜಲದ ಪ್ರದೇಶವೆಂಬುದಾಗಿ ಮಾತ್ರ ಕಾಣುತ್ತಿದ್ದನು. ಆ ಅಪರಂಪಾರ ಸಾಗರ ಸ್ವರೂಪವನ್ನು ನೋಡಿ ನಾನು ದಿಗ್ಭ್ರಮೆಗೊಂಡೆನು. ಏನು ಆ ಭವ್ಯ ಪಸರ!........ ನಾನು ಹತಬುದ್ಧ ಸ್ಥಿತಿಯಲ್ಲಿರುವಾಗಲೇ ನನ್ನ ಅಣ್ಣ ವಿನೋದನ "ಮಾಟಗಾರ" ಎಂಬ ಶಬ್ದವು ಕಿವಿಗೆ ಬಿದ್ದು, ನಾನು ನಿದ್ದೆಯಲ್ಲಿಯ ಕನಸಿನೊಳಗಿಂದ

ಎಚ್ಚತ್ತಿನು.

ಪಡಸಾಲೆಯಲ್ಲಿ ವಿನೋದನು ಮಾಟಗಾರನ ಬಗ್ಗೆ ಹೇಳು ತ್ತಿದ್ದನು. ಆ ಕಡೆಗೆ ನನ್ನ ಗಮನ ಹೋಯಿತು. ನಾನು ಕೇಳತೊಡಗಿದೆ. ಯಾವನೋ ಒಬ್ಬ ಮಾಟಗಾರನಿರುವನಂತೆ. ಆತನು ಸಣ್ಣವನೂ ಆಗುವನು, ಪ್ರಚಂಡನೂ ಆಗುವನು. ಪಶು-ಪಕ್ಷಿ-ಮನುಷ್ಯರನ್ನು ನಿರ್ಮಿಸುವನಂತೆ. ಹೊಲಗಳನ್ನು ಬೆಳೆಸುವನು, ಜಲ ವರ್ಷಿಸುವನು, ಸಾಗರದೊಂದಿಗೆ ಮೈತ್ರಿ ಬೆಳೆಸುವನು, ಅಗ್ನಿಯ ಜೊತೆಯಲ್ಲಿಯೂ ಇರುವನಂತೆ. ವಾಯುವಿನೊಡನೆ ಸಂಚರಿಸುವನು, ಆಕಾಶದೊಳಗೂ ವಿಹರಿ ಸುವನಂತೆ. ಆತನು ದಯೆ ಮಾಡುವ ಹಾಗೂ ಮುನಿಯುವ ಕೊಡುವ ಹಾಗೂ ಕೊಳ್ಳುವನಂತೆ. ಇಷ್ಟೇ ಅಲ್ಲ, ಬಾಗಿಲು ಕಿಟಕಿ ಮುಚ್ಚಿದರೂ ಮನೆಯ ಒಳಗೂ ಪ್ರವೇಶಿಸುವನಂತೆ! ನನ್ನ ಹೊಟ್ಟೆಯಲ್ಲಿ ಒಮ್ಮೆಲೆ ಧಸ್ಸೆಂದಿತು. ಬಲಗೈಯಲ್ಲಿ ಸಣ್ಣ ಬೆತ್ತ ಹಿಡಿದು, ಬೆರಳ ಸುತ್ತು ಗರಗರ ತಿರುಗಿಸುತ್ತ ಚಲ್ ಚಲ್ ಚಲ್ ಎನ್ನುತ್ತಿರುವ ದೊಡ್ಡ ಕಣ್ಣಿನ, ಕಪ್ಪು ಬಣ್ಣದ ಮಾಟಗಾರನು ನನ್ನ ಮನಶ್ಚಕ್ಷುವಿನ ಮುಂದೆ ಚಕ್ಕನೆ ಬಂದು ಹೋದನು.

ಸೂರ್ಯಾಸ್ತವಾಯಿತು. ಮೆಲ್ಲನೆ ಕತ್ತಲೆ ಕವಿಯ ತೊಡ ಗಿತು. ಮನೆಯಲ್ಲೆಲ್ಲಾ ಕಡೆ ಹಣತೆ ಹಚ್ಚಿಟ್ಟೆ. ಎಲ್ಲೆಲ್ಲೂ ನೀರವತೆ ತುಂಬಿತು. ಮನೆಯ ಮಂದಿ ನಿದ್ದೆ ಮಾಡಲೆದ್ದರು. ನಾನೂ ನಿದ್ದೆ ಮಾಡಲು ಹಾಸಿಗೆಯ ಮೇಲೆ ಒರಗಿದೆನು; ಅಷ್ಟರೊಳಗೆ ಒಮ್ಮೆಲೆ ನನಗೆ ಮಾಟಗಾರನ ನೆನಪು ಬಂದಿತು. ನನ್ನ ಎದೆ ಹಾರತೊಡಗಿತು........ ದೊಡ್ಡ ಕಣ್ಣಿನ, ಕಪ್ಪು ಬಣ್ಣದ ಮಾಟಗಾರ ತನ್ನ ಬೆತ್ತ ತಿರುಗಿಸುತ್ತ ಚಲ್ ಚಲ್

ಎನ್ನುತ್ತ ನಮ್ಮ ಮನೆಯಲ್ಲಿ ಹೊಕ್ಕರೆ.....? ಮಾಟಗಾರನು ನನ್ನನ್ನು ಎತ್ತನ್ನಾಗಿ ಮಾಡಿದರೆ. ನಾನು ಒಜ್ಜೆ ಹೊತ್ತು ಹೊತ್ತು ಅರ್ಧ ಸತ್ತಂತೆ ಆಗಬೇಕಾದೀತು; ಅಲ್ಲವೆ ವೇಳೆ ಬಾರುಕೋಲಿನ ಹೊಡೆತ! ಆಕಳು ಮಾಡಿದರೆ, ನನ್ನನ್ನು ಗೋದಲೆಯಲ್ಲಿ ಕಟ್ಟಿ ಮೇವು ತಿನ್ನಲು ಹಚ್ಚುವರು! ಹೋತು ಇಲ್ಲವೆ ಟಗರು ಮಾಡಿದರೆ ಬಲಿ ಹೋಗಬೇಕಾಗಿ ಬಂದೀತು! ಪಕ್ಷಿಯನ್ನಾಗಿ ಮಾಡಿದರೆ, ಯಾರಾದರೂ ಗುಲೇಲದಿಂದ ಹೊಡೆಯುವ ಸಂಭವ! ಬಾಗಿಲು ಕಿಟಕಿ ಮುಚ್ಚಿದರೂ ಒಳಗೆ ಪ್ರವೇಶ ಮಾಡುವ ಮಾಟಗಾರನನ್ನು ಎಂತು ಎದುರಿಸ ಬೇಕೆಂಬುದು ನನಗೇನೂ ತೋಚಲೊಲ್ಲದು. ನಾನು ಭಯಭೀತ ಳಾದೆ. ಮರಣಕ್ಕಿಂತಲೂ ಮರಣದ ಕಲ್ಪನೆಯಿಂದಲೇ ಹೇಗಾಗುವುದೋ ಹಾಗಾಯಿತು ನನಗೆ. ನಾನು ಕಣ್ಣು ತೆರೆದಿಟ್ಟುಕೊಂಡೇ ಹಣತೆಯ ಬೆಳಕಿನ ಕಡೆಗೆ ನೋಡುತ್ತ, ಮಾಟಗಾರನ ಕೈಯೊಳಗಿಂದ ಪಾರಾಗುವ ಹಂಚಿಕೆಯನ್ನು ಮಾಡತೊಡಗಿದೆ!

ಹಣತೆಯೊಳಗಿನ ಎಣ್ಣೆ ತೀರಿತು— ಗಾಳಿಯಿಂದ ಜ್ಯೋತಿ ಆರಿಹೋಯಿತು. ಹಣತೆಯ ಮಿಣಿ ಮಿಣಿ ಬೆಳಕೂ ಇಲ್ಲ ದಾಯಿತು. ಮುಳುಗುವವನಿಗೆ ಕಡ್ಡಿಯೂ ದೊಡ್ಡ ಆಧಾರ ವೆನಿಸುವಂತೆ, ನನಗೂ ಆ ಮಿಣಿ ಮಿಣಿ ಬೆಳಕು ಬೀರುವ ಹಣತೆಯು ಆಧಾರವೆನಿಸುತ್ತಿತ್ತು. ಆ ಕತ್ತಲೆಯಲ್ಲಿ ನನಗೆ ದೊಡ್ಡ ಕಣ್ಣಿನ, ಕಪ್ಪು ಬಣ್ಣದ ಮಾಟಗಾರನು ಕಾಣಹತ್ತಿದನು. ನಾನು ಕಣ್ಣು ಗಟ್ಟಿಯಾಗಿ ಮುಚ್ಚಿಕೊಂಡೆ. ಆದರೂ ಮಾಟಗಾರನು ಕಾಣುತ್ತಲೇ ಇದ್ದನು. ಏನೆಂದರೂ ಆತನು ಮಾಟಗಾರನೇ! —ನಾನು ಕಣ್ಣು ಮುಚ್ಚಿದರೇನು, ತೆರೆದ

ರೇನು ? ನನ್ನ ಎದೆ ಡವಡವ ಹಾರಹತ್ತಿತು ಮೈಯೆಲ್ಲ ಬೆವರೊಡೆಯಿತು. ನಾನು "ಅಮ್ಮಾ!" ಎಂದು ಎತ್ತರದ ದನಿಯಲ್ಲಿ ಕೂಗಿದೆ. ನನ್ನ ಅಮ್ಮ ನನ್ನ ಬಳಿಯೇ ಇದ್ದಳು. ಆದರೆ ಮಾಟಗಾರನ ಹೆದರಿಕೆಯಿಂದ ನಾನು ಮರೆತ್ತು ಹೋಗಿದ್ದೆ. ನಾನು ಭೀತಿಗ್ರಸ್ತಳಾಗಿ ಚೀರಿದುದನ್ನು ಕೇಳಿ ತಾಯಿಯು ನನ್ನನ್ನು ಹತ್ತಿರ ಕರೆದುಕೊಂಡಳು. ತನ್ನ ಮೈಮೇಲೆ ಹೊತ್ತುಕೊಂಡುದನ್ನು ನನಗೆ ಹೊದಿಸಿ, ತನ್ನ ಕೈ ನನ್ನ ಮೈ ಮೇಲಿಟ್ಟು, "ಹೆದರಬೇಡ, ಮಗೂ! ನಾನಿರುವೆ. ಶಾಂತವಾಗಿ ನಿದ್ದೆ ಮಾಡು" ಎಂದಳು. ಸಂಕಟ ಕಾಲದಲ್ಲಿ ಆಕಸ್ಮಿಕ ಸಹಾಯ ದೊರೆತರೆ ಸಂಕಟಗ್ರಸ್ತನಿಗೆ ಧೈರ್ಯ ಬರುವಂತೆ ತಾಯಿಯ ಆಶ್ವಾಸನದಿಂದ ನನಗೂ ಹಾಗೆ ಧೈರ್ಯವೆನಿಸಿತು. ತಾಯಿಯ ಹೊದಿಕೆ ನನಗೆ ಭದ್ರ ಕೋಟೆಕೊತ್ತಳವಾಗಿ ತೋರಿತು. ತಾಯಿಯ ಕೈ ನನಗೆ ಸಂರಕ್ಷಣೆ ಎನಿಸಿತು. ತಾಯಿಯ ಹೊದಿಕೆಯಲ್ಲಿ ನಾನು ಗಾಢ ನಿದ್ರೆ ಮಾಡಿದೆನು.

ಪ್ರಭಾತ ಸಮಯದಲ್ಲಿ ನಾನು ತಾಯಿಯೊಡನೆಯೇ ಎದ್ದೆ. ತಾಯಿಯ ಬೆನ್ನು ನಾನು ಬಿಟ್ಟುಬಿಟ್ಟರೆ.... ....? ಮಾಟಗಾರ.... ....! ತಾಯಿಯ ಬೆನ್ನು ನಾನು ಬಿಡಲೇ ಇಲ್ಲ. ನಿತ್ಯದಂತೆ ತಾಯಿಯ ಪೂಜೆ-ಅರ್ಚೆಗೆ ಪ್ರಾರಂಭವಾಯಿತು; ನಾನು ಸಮೀಪದಿಂದಲೇ ನೋಡುತ್ತ ಕುಳಿತೆ. ತಾಯಿಯ ಏಕತಾನತೆಯನ್ನು ನೋಡಿ, ನಾನು ಕುತೂಹಲದಿಂದ ಕೇಳಿದೆ— "ಅಮ್ಮಾ! ದೇವರ ಪೂಜೆ ಏಕೆ ಮಾಡಬೇಕು? ಪ್ರಸನ್ನವದನದಿಂದ ನನ್ನ ಕಡೆ ನೋಡುತ್ತ ತಾಯಿಯೆಂದಳು: ಮಗೂ! ದೇವರು ಭಕ್ತರ ಸಂಕಟ ದೂರ ಮಾಡುವನು.

ಭೀತಿ ಕಳೆಯುವನು. ನಿನ್ನೆ ನಾನು ನಿನಗೆ ಹೊಚ್ಚಿದ ಹಾಗೆಯೇ ದೇವರು ಕೃಪೆಯ ಹೊದಿಕೆಯನ್ನು ತನ್ನ ಭಕ್ತರಿಗೆ ಹೊದಿಸುವನು, ಭಕ್ತರ ಸರ್ವ ಭಾರವನ್ನು ದೇವರು ಹೊರುವನು. ತನ್ನ ಭಕ್ತರಿಗೆ ಸುಖ ಶಾಂತಿ ಕೊಡುವನು. ಕತ್ತಲೆಯಲ್ಲಿ ಕೃಷ್ಣಕೃತ್ಯಗಳು ಜರುಗುವುದರಿಂದ ದೇವರು ಭಕ್ತರನ್ನು ಬೆಳಕಿನಲ್ಲಿಡುವನು." ನಾನೆಂದೆ— "ಅವ್ವಾ ! ಸದಾಕಾಲ ಬೆಳಕು ಹೇಗೆ ಬೀಳುವುದು ?" ತಾಯಿಯೆಂದಳು — "ಗಗನದಲ್ಲಿ ಸೂರ್ಯನು ಪ್ರಕಾಶಿಸುವಂತೆಯೇ ಸ್ವಯಂ ಪ್ರಕಾಶವೂ ನಿರಂತರವಾಗಿ ಬೆಳಗುವಂತಹದೂ ಆದ ದೀಪವನ್ನು ದೇವರು ಪ್ರಜ್ವಲಿತಗೊಳಿಸುವನು."

ಮುಂದೆ ನಿತ್ಯನೇಮದಿಂದ ನಾನು ದೇವರ ಎದುರಿಗೆ ಧೂಪ ದೀಪ ಇರಿಸಹತ್ತಿದೆ; ಹಾಗೂ "ಕತ್ತಲೆ ಕಳೆ, ದೇವಾ!" ಎಂದು ಪ್ರಾರ್ಥಿಸತೊಡಗಿದೆ. ಒಂದು ದಿನ ನಿತ್ಯದಂತೆ ದೇವರಿಗೇರಿಸಲು ಹೂ ಎತ್ತಲು ನಾನು ಹಿತ್ತಿಲ ತೋಟದಲ್ಲಿ ಹೋದೆ. ದೊಡ್ಡ ದೊಡ್ಡ ಸೂರ್ಯಪಾನದ ಹೂಗಳು ಸೂರ್ಯಾಭಿಮುಖವಾಗಿ ಪೂರಾ ಅರಳಿ ನಳನಳಿಸುತ್ತಿದ್ದವು. ಅರಳಿದ ಹೂವನ್ನು ನಾನು ಚಿವುಟಿ ತೆಗೆಯಬೇಕೆನ್ನುವಷ್ಟರಲ್ಲಿ ಆದರ ದೇಟು ಗರ್ರನೆ ತಿರುಗಿ, ಸುಕುಮಾರ ಶಿಶು ಟುಕು ಟುಕು ನೋಡುವಂತೆ ಆ ಹೂ ನನ್ನ ಕಡೆ ನೋಡತೊಡಗಿತು. ನಾನು ತಟ್ಟನೆ ಕೈ ಹಿಂದಕ್ಕೆ ತೆಗೆದುಕೊಂಡು, ಓಡಿಹೋಗಿ ಮನೆ ಸೇರಿದೆ. ಮಾಟಗಾರನ ಮಾಟವಿಲ್ಲದೆ ಹೂಗಳೆಂದಾದರೂ ಟುಕುಟುಕು ನೋಡಬಹುದೇ ? ದೇವರ ಚರಣದಲ್ಲಿ ತಲೆಯಿರಿಸಿದೆ. ಎದೆ ಹಾರುವುದು ನಿಲ್ಲುವ ವರೆಗೂ ತಲೆ ಎತ್ತಲೇ ಇಲ್ಲ.

ಏನದ ಹಿಂದೆ ದಿನ ಉರುಳುತ್ತಿತ್ತು. ನವರಾತ್ರಿಯಾಗಿ ಹೋಯಿತು. ವಿಜಯಾದಶಮಿ ಬಂದಿತು. ಹಬ್ಬದ ಅಡಿಗೆಯ ಸರುಗಂಪಿನಿಂದ, ಏಲಕ್ಕಿ-ಕೇಶರಗಳ ಸುವಾಸನೆಯಿಂದ ಅಡಿಗೆಮನೆಯು ಇಡುಗಿಬಿಟ್ಟಿತ್ತು! ಬಟಾಟೆಯನ್ನದ ಮಸಾಲೆಯ ಕಮ್ಮಗಿನ ನಾತವು ಮುಚ್ಚಳದೊಳಗಿಂದ ಅಡಿಗೆ ಮನೆ ವ್ಯಾಪಿಸಿ ಹೊರಗೂ ಪಸರಿಸಿತ್ತು! ಜಿಲೇಬಿ ತುಂಬಿದ ತಾಟುಗಳಿಂದ ಅಡಿಗೆಮನೆಗೆ ವಿಶಿಷ್ಟ ಶೋಭೆ ಬಂದಿತ್ತು ದೇವರಿಗೆ ಮಹಾನೈವೇದ್ಯವಾಯಿತು. ಎಲ್ಲರಿಗೆ ಎಲೆಗಳನ್ನು ಹಾಕಲಾಯಿತು. "ಕೃಷ್ಣಾರ್ಪಣ" ಎಂದು ನೀರು ಬಿಟ್ಟು ಊಟ ಪ್ರಾರಂಭಿಸಿದೆ. ಆಗ್ರಹ ಮಾಡಿಮಾಡಿ ಪಂಕ್ತಿಯಲ್ಲಿ ಬಡಿಸಲಾಗುತ್ತಿತ್ತು. ಒಂದರ ಹಿಂದೆ ಇನ್ನೊಂದು ಅಡಿಗೆಯ ಪದಾರ್ಥವು ಬರುತ್ತಲೇ ಇತ್ತು, ನನ್ನ ಎಲೆ ತೆರವಾಗಿಯೇ ಉಳಿಯುತ್ತಿತ್ತು. ಕೊನೆಗೆ ಮೊಸರನ್ನದ ನಾಲ್ಕು ತುತ್ತು ತೆಗೆದುಕೊಂಡು ಎಲ್ಲರೊಡನೆ ನಾನು ಎದ್ದೆ; ಅಷ್ಟರಲ್ಲಿ ಮಂತ್ರ ಮುಗ್ಧಳಂತೆ ನನ್ನ ಸ್ಥಿತಿಯಾಯಿತು. ನನ್ನೊಡನೆಯೇ ಯಾರೋ ಅಪರಿಚಿತರೊಬ್ಬರು ಎದ್ದರು, ನಾನು ಚಕಿತಳಾದೆ! ಮೊಸರನ್ನದಿಂದ ಮುಸುರೆಯಾದ ಬಲ ಅಂಗೈ, ಎಡಕಂಕುಳಲ್ಲಿ ಕೊಳಲು, ಸುವರ್ಣ ಕಟಿಭೂಷಣ, ಮುಂಗುರಳಲ್ಲಿ ನವಿಲ ಗರಿ— ಹೀಗೆ ವೇಷಭೂಷಣಾಂಕಿತವಾದ ಅತಿ ಸುಂದರ ಬಾಲ ರೂಪವು ನನ್ನ ಮುಂದೆ ನಿಂತಿತ್ತು! ಆ ಬಾಲಕನದೂ ನನ್ನದೂ ದೃಷ್ಟಿಗೆ ದೃಷ್ಟಿ ಕೂಡಿದೊಡನೆ ನಾನು ಮೈಮರೆತೆ. ನಾನು ಎಚ್ಚರದಾಳಿ ಕಣ್ತೆರೆದು ನೋಡುವಷ್ಟರಲ್ಲಿ, ಕನಸು ಕರಗು ವಂತೆ ಆ ದೃಶ್ಯವು ಕಾಣದಾಯಿತು. ಕ್ಷಣಮಾತ್ರವೇ ಆಗಲಿ, ಮೈಮರೆಯಬೇಕೇ? —ಅದೂ ಎಚ್ಚರಿಕೆಯಿರುವಾಗಲೇ?

ಮಾಟಗಾರನ ಮಾಟವಿಲ್ಲದೆ ಹೀಗೆ ಆಗುವುದುಂಟೇ? ಆ ಬಾಲರೂಪದ ನಯನದೀಪ್ತಿಯಂತೂ ಪರರ ಹೃದಯವನ್ನು ಅಪಹರಿಸುವಂತಹದೇ ಆಗಿತ್ತು. ಸಾದಾ ಸರಳ ನಯನಗಳಲ್ಲಿ ಇಂತಹ ಮೋಹನೀ ಶಕ್ತಿಯಿರುವುದುಂಟೇ? ಮಾಟಗಾರನ ಹೊರತು ಯಾರಾದರೂ ಮಾಟ ಮಾಡುವರೇ? ಮಾವಿನ ಹಣ್ಣನ್ನಲ್ಲ—ಅದರ ಗೊರಟವನ್ನು ನೆಲದಲ್ಲಿ ಹೂಳಿ, ಅದರಿಂದ ಗಗನಚುಂಬಿ ವೃಕ್ಷ ಮಾಡಿ ಅದಕ್ಕೆ ಮಾವಿನ ಹಣ್ಣುಗಳ ಗೊಂಚಲುಗಳು ತೂಗುವಂತೆ ಮಾಡುವ ಮಾಟಗಾರನು ಏನು ಬೇಕಾದ್ದದನ್ನು ಮಾಡಬಲ್ಲ!

ಕತ್ತಲೆ ಕವಿಯಹತ್ತಿದೊಡನೆ ನನ್ನ ಎದೆ ಡವಡವ ಹಾರುತ್ತಿತ್ತು. ಕತ್ತಲೆ ಕಳೆಯಲಿ ಹಾಗೂ ಎಂದಿಗೂ ಬೆಳಕು ಬೀರುವ ದೀವಿಗೆಯನ್ನು ದೇವರು ಹಚ್ಚಲಿ ಎಂದು ಎಷ್ಟೊಂದು ಕಕ್ಕುಲಾತಿಯಿಂದ ನಾನು ಪ್ರಾರ್ಥನೆ ಮಾಡುತ್ತಿದ್ದೆ. ಅತ್ತು ಅತ್ತು ಕೂಡಾ ನಾನು ದೇವರಲ್ಲಿ ಮೊರೆಯಿಡುತ್ತಿದ್ದೆ. ಬಿಕ್ಕಿ ಬಿಕ್ಕಿ ಅಳುತ್ತಲೂ ನಾನು ದೇವರಲ್ಲಿ ಬೇಡಿಕೊಳ್ಳುತ್ತಿದ್ದೆ. ಆದರೆ ದೇವರು ನನ್ನ ಅಣತಿಯನ್ನು ಗಣನೆಗೆ ತಂದುಕೊಳ್ಳಲಿಲ್ಲ. ಎಷ್ಟೋ ಸಲ ಕೈಯಲ್ಲಿ ಹಣತೆ ಹಿಡಿದು ಇರುಳ ಹೊತ್ತಿನಲ್ಲಿ, ದೇವರು ದೀಪ ಹಚ್ಚಿಟ್ಟಿರುವನೇ ಎಂದು ಹಣತೆಯ ಬೆಳಕಿನಲ್ಲಿ ಮನೆಯೆಲ್ಲ ಹುಡುಕಿ ನೋಡುತ್ತಿದ್ದೆ. ಆದರೆ ದೀಪವನ್ನೇ ಆತ ಹಚ್ಚಿರಲಿಲ್ಲ ಎಂದಾಗ ಹಣತೆಯ ಬೆಳಕಿನಲ್ಲಿ ಅದು ಹೇಗೆ ಕಾಣಬೇಕು? ಮಾನವನಿಗೆ ತನ್ನ ಸ್ತುತಿ ಸೇರುವುದು. ತನ್ನ ಕೀರ್ತಿ ಕೇಳಿ ಆತನ ಸಂತೋಷಕ್ಕೆ ಸೀಮೆಯೇ ಉಳಿಯುವುದಿಲ್ಲ. ತನ್ನ ಕೀರ್ತಿಗಾನ ಮಾಡುವವರಿಗೆ ಮೆಚ್ಚು ಕೊಡುವನು. ದೇವರದೂ ಹೀಗೆಯೇ ಇರಬೇಕೆಂದು ನಾನು

ತರ್ಕಿಸಿದೆ, ಹಾಗೂ ಗೊತ್ತುಪಡಿಸಿದೆ— ನಾಳೆಯ ದಿನ ದೇವರಿಗೆ ಖವೆ-ಪೇಢೆಗಳ ನೈವೇದ್ಯ ತೋರಿಸುವುದು, ಅವನ ಗುಣಗಾನ ಮಾಡುವುದು, ಹೇರಳವಾಗಿ ಸ್ತುತಿ ಮಾಡುವುದು, ಕರ್ಪೂರ-ಊದಿನಕಡ್ಡಿ-ಲೋಬಾನಗಳ ಪರಿಮಳದಿಂದ ಅವ ನನ್ನು ಪ್ರಸನ್ನಗೊಳಿಸುವುದು. ಹೀಗೆಂದು ಹಂಚಿಕೆ ಮಾಡಿ ನಾನು ನಿದ್ದೆಹೋದೆ.

ಬೆಳಿಗ್ಗೆ ಹಾಲು ಹಿಂಡಲು ಗೋದಲಿಗೆ ಹೋದೆ. ಆವು ದಿನದಂತೆ ನನ್ನ ಮೈ ನೆಕ್ಕಿ ತನ್ನ ಸಂತಸ ಸೂಚಿಸಿತು. ಕರು ವಂತೂ ನನ್ನನ್ನು ನೋಡಿದೊಡನೆ ಜಿಗಿದಾಡಲು ಪ್ರಾರಂಭಿ ಸಿತು. ಆದರೆ ಇಂದು ನನ್ನ ಗಮನವೆಲ್ಲ —ದೇವರನ್ನು ಪ್ರಸನ್ನ ಗೊಳಿಸುವುದರ ಕಡೆಗೆ, ಹಾಲು ಕರೆಯುವುದರ ಕಡೆಗೆ ತೊಡ ಗಿತ್ತು. ನಿತ್ಯದಂತೆ ಆವು-ಕರುಗಳ ಮೈದಡವಿ ಕೈಯಾಡಿ ಸಲು ನನಗೆ ಹೊತ್ತೆಲ್ಲಿಂದ ಬರಬೇಕು ? ಕರುವನ್ನು ಕಸುವಿ ನಿಂದ ಎಳೆದುಕೊಂಡು ಹೋಗಿ ದೂರ ಒಯ್ದು ಕಟ್ಟಿದೆ. ಹಾಗೂ ಪಾತ್ರೆ ತೆಗೆದುಕೊಂಡು ಹಾಲು ಹಿಂಡಲು ಕುಳಿತೆ. ಸೌಮ್ಯ, ಶಾಂತ ಸ್ವಭಾವದ ಧೇನು— ಆದರೆ ಇಂದು ಹಾಲನ್ನೇ ಕೊಡಲೊಲ್ಲದು. ಇಂದೇ ಮೊದಲ ಸಲ ನಾನು ಹಾಲು ಹಿಂಡಲು ಬಂದದ್ದು— ಅದಾದರೂ ದೇವರಿಗಾಗಿ. ಅದರ ಲ್ಲಿಯೂ ದೇವರಿಗೆ ಹಾಲಿನ ಜಿನಸುಗಳನ್ನಿಟ್ಟು ಪ್ರಸನ್ನಗೊಳಿ ಸುವುದಿದ್ದಿತೆಂದು ನಾನು ಬಂದದ್ದು. ಹೀಗಿದ್ದರೂ ಧೇನು ನಗೆ ಹಾಲು ಕೊಡಬಾರದೇ ? ನನಗೆ ಸಿಟ್ಟು ಬಂದಿತು. ಹತ್ತಿರದಲ್ಲಿಯೇ ಬಿದ್ದಿದ್ದ ಬಡಿಗೆಯಿಂದ ಎರಡೇಟು ಕೊಟ್ಟು ಸಿಕ್ಕಿದಷ್ಟು ಹಾಲು ತೆಗೆದುಕೊಂಡು ನಾನು ಅಲ್ಲಿಂದ ಎದ್ದೆ. ತನ್ನ ಕಡೆಗೆ ಅಂಗಲಾಚಿ ಹೋಗಲೆಳಸುತ್ತಿರುವ ಕರುವನ್ನು

ಥೇನು ನೋಡಿತು; ಆಕೆಯ ಕಣ್ಣಿನಿಂದ ಎರಡು ಹನಿ ತೊಟ ಕಿಕ್ಕುವುದು ನನಗೆ ಕಂಡಿತು.

ಯೋಜಿಸಿದಂತೆ ಎಲ್ಲ ಸಾಹಿತ್ಯ ತೆಗೆದುಕೊಂಡು ಪೂಜನಕ್ಕೆ ಕುಳಿತೆ. ನೈವೇದ್ಯ ಸ್ವೀಕರಿಸಲು ದೇವರನ್ನು ಪ್ರಾರ್ಥಿಸ ತೊಡಗಿದೆ. ಅವನ ಕೀರ್ತಿಯನ್ನು ಪರಿಪರಿ ಬಣ್ಣಿಸಿ ಹಾಡಿದೆ. ಬಿನ್ನಹ ಮಾಡಿ ಮಾಡಿ ಬಾಯಾರಿತು. ನಿರಾಶೆಯಿಂದ ನಾನು ಖಿನ್ನಳಾದೆ. ಹಾಗೂ ಅಂತಿಮ ಪ್ರಾರ್ಥನೆಯೆಂದು— "ದೇವಾ! ನಿನಗಾಗಿ ತಂದ ಈ ನೈವೇದ್ಯವನ್ನಾದರೂ ಸ್ವೀಕ ರಿಸಬಾರದೆ? ನಿನಗಾಗಿ ಸಿದ್ಧಪಡಿಸಿದ ಈ ನೈವೇದ್ಯ ನೀನು ಸ್ವೀಕರಿಸುವುದಿಲ್ಲವೇಕೆ?" ಎಂದು ನಾನು ಅನ್ನುತ್ತಿರುವಷ್ಟ ರಲ್ಲಿ, ನನ್ನ ಬೆನ್ನ ಹಿಂದೆಯೇ ನಿಂತ ತಾಯಿ ಎಂದಳು— "ಕರುವಿಗೆ ಹಾಲು ಬಿಡದೆ ಇರಿಸಿದ ನೈವೇದ್ಯವನ್ನು ದೇವರು ಹೇಗೆ ಸ್ವೀಕರಿಸುವ, ಮಗು? ಆವಿಗೆ ತೊಂದರೆ ಕೊಟ್ಟು ತೆಗೆದ ಹಾಲಿನ ಖನೆ ದೇವರಿಗೆ ಹೇಗೆ ಸೇರೀತು? ಆವಿನ ಕಣ್ಣೀರು ದೇವರಿಗೆ ತೋರದಿರುವುದೇ?"

ಕಣ್ಣೊಳಗೆ ಬಿದ್ದ ಕಸರು ಅಳುಕುತ್ತಿರುವಂತೆ ನನಗಾ ಯಿತು. ವಸ್ತ್ರದಲ್ಲಿದ್ದ ಕಂಟಕವು ಮೈಗೆ ಚುಚ್ಚುವಂತೆ ನನ ಗಾಯಿತು. ಮಾಡಿದ ಪಾಪವು ಮನಸ್ಸನ್ನು ಅಸ್ವಸ್ಥಗೊಳಿಸು ವಂತೆ ನನಗಾಯಿತು. ನಾನು ಪೂಜೆ ಬಿಟ್ಟಿದ್ದು, ತಟ್ಟನೆ ಗೋದಲೆಗೆ ಹೋದೆ. ಕರುವಿನ ಮೈಮೇಲೆ ಮಮತೆಯಿಂದ ಕೈಯಾಡಿಸಿದೆ, ಆವಿನ ಕಣ್ಣ ಹನಿ ನನ್ನ ಸೆರಗಿನಿಂದ ಒರಸಿದೆ. ದೇವರ ನೈವೇದ್ಯವನ್ನು ಆವು-ಕರುಗಳಿಗೆ ತಿನಗೊಟ್ಟು, ದೇವ ರೆದುರಿಗೆ ಬಂದು ಕೈ ಮುಗಿದು ಎಂದೆ— "ಪ್ರಭೋ ಜೀವಜಾತಗಳಿಗೆ ನಾನಿನ್ನು ಎಂದೂ ದುಃಖ ಕೊಡುವುದಿಲ್ಲ.

ನನ್ನನ್ನು ಕ್ಷಮಿಸು ! ” ನನ್ನ ಕಣ್ಣಿನಿಂದ ನೀರು ಧಾರೆಯಾಗಿ ಹರಿಯುತ್ತಿತ್ತು; ಆ ಹರಿಯುವ ಕಂಬನಿಯಿಂದ ನನ್ನ ಮನಸ್ಸು ತೊಳೆಯಲ್ಪಡುತ್ತಿತ್ತು. ಮತ್ತು ತೊಳೆದ ಮನಸ್ಸಿನಲ್ಲಿ ನನ್ನ ಕಣ್ಣೆದುರಿನಲ್ಲಿರುವ ದೇವರ ಪ್ರತೀಕದ ಸುಂದರ ಸ್ವರೂಪವು ಮೂಡತೊಡಗಿತು. ಹಾಗೂ ನಾನು ಅಂತಃಕರಣದ ಆಳದಿಂದ ಪ್ರಾರ್ಥಿಸತೊಡಗಿದೆ—

ಘನತಿಮಿರದಿ ಗಾಬರಿಗೊಂಡಿದೆ ಮನ !
 ಅರೆಕ್ಷಣ ಕಳೆಯದೆ ಬಾರೈ ಪ್ರಭುವೇ ! ।
ಹಗಲೂ ಇರುಳೂ ಡಾಳಿಪ ದೀಪವ
 ಕರುಣಿಸಿ ಹಚ್ಚೈ ಸ್ವಕರದಿ ವಿಭುವೇ ! ॥
ಹೃನ್ಮಂದಿರದಲಿ ನೀನೇ ನೆಲಸಿಹೆ
 ಕಣ್ಣೂ ಬೇಳ್ಪುದು ನಿನ್ನಯ ದರ್ಶನ ! ।
ಅಂತಃಕರಣದ ಕರೆಯಿದು ನಿನ್ನಯ
 ಕರುಳನು ಕರಗಿಸದೇ ಕರುಣಾಘನ ! ॥

ದಿನದ ಹಿಂದೆ ದಿನ ಉರುಳುತ್ತಿತ್ತು. ಕಾಲಚಕ್ರದ ಗತಿಯು ನನ್ನ ಭಕ್ತಿಗೆ ರೂಪ ಕೊಡುತ್ತಿತ್ತು. ಒಂದು ದಿನ ನಸುಕಿನಲ್ಲಿ ಹಿತ್ತಿಲ ತೋಟದ ಗಿಡದಲ್ಲಿ ಕೋಕಿಲಗಳು ‘ ಕುಹು! ಕುಹು!’ ಎಂದು ಮಂಜುಲವಾಗಿ ಕೂಕಿಲುತ್ತಿದ್ದವು. ಅರಗಿಳಿಗಳು ಬೇರೆ ಬೇರೆ ಸ್ವರಗಳಿಂದ ಕೂಜಿಸುತ್ತಿದ್ದವು. ಉದ್ದ ಚುಂಚಿನ ಚಿಕ್ಕ ನೀಲ ಪಕ್ಷಿಯು ಸುಸ್ವರದಿಂದ ಸಿಳ್ಳು ಹಾಕುತ್ತಿತ್ತು. ಹಳದಿ ಕಣ್ಣಿನ ಮೈನೆಗಳು ಮಂಜುಲವಾಗಿ ಮಾತನಾಡುತ್ತಿದ್ದವು. ಮೆತ್ತಗಿನ ಹಾಸಿಗೆಯ ಮೇಲೆ ಬಿದ್ದುಕೊಂಡು ಕರ್ಣಮಧುರವಾದ ಈ ಪ್ರಾತಃಕಾಲದ ಪಕ್ಷಿಗಳ ಜಲಸೆಯನ್ನು ನಾನು ಕೇಳುತ್ತಿದ್ದೆ. ಗಾಢ ನಿದ್ರೆಯ ತರುವಾಯ ಬರುವ ಪ್ರಭಾತದ ಪ್ರಫುಲ್ಲತೆ, ಶಾಂತಸಮಯ, ಕೂಜನಶ್ರವಣ, ನಿಶ್ಚಿಂತ

ಮಾನಸ— ಇವೆಲ್ಲ ನನಗೆ, ಹಾಲು, ಸಕ್ಕರೆ, ಕೇಶರ, ಏಲಕ್ಕಿ ಜಾಜಿಕಾಯಿ ಇವುಗಳ ಮಿಶ್ರಣದಂತೆ ರುಚಿಕರ-ಹಿತಕರ-ಸುಖ ಕರವಾಗಿ ಅನಿಸಿತು. ಗಿಡಕ್ಕೆ ನೀರೆರೆದರೆ ಪರ್ಣಗಳು ಪ್ರಸನ್ನ ವಾಗಿ ಚಲಿಸುವಂತೆ ನನಗಾಯಿತು. ತುಂಬಿ ಬಂದ ಉಲ್ಲಾ ಸವು ನನಗೆ ಸುಮ್ಮನೆ ಹಾಸಿಕೆಯ ಮೇಲೆ ಒರಗಗೊಡಲೊಲ್ಲದು; ಕೈಕಾಲು ಅಲ್ಲಾಡಿಸಲು ಹಚ್ಚಿತು. ನಾನೆದ್ದು ಬಂದೆ. ಇಂದು ಮನೆಯಲ್ಲಿ ಸತ್ಯನಾರಾಯಣನ ಪೂಜೆ. ಚಟ್ಟನೆ ಸ್ನಾನಮುಗಿಸಿ, ಪೂಜಾಸಾಹಿತ್ಯದ ಸಿದ್ಧತೆಗೆ ಹತ್ತಿದೆ. ಪೂಜೆ ಮುಗಿದು, ಮಹಾನೈವೇದ್ಯವಾಗಿ, ಊಟದ ಪಂಕ್ತಿಗಳು ಏಳತೊಡಗಿ ದವು. ಅತಿಥಿ ಭೋಜನ ಮುಗಿದು, ಸುವಾಸಿನಿಯರ ಪಂಙ್ತಿಯಾಗಿ, ಬಡಬಗ್ಗರ ಊಟವೂ ಆಯಿತು; ಬಡವರ ಹಸಿದ ಹೊಟ್ಟೆ ತೃಪ್ತಿಯಿಂದ ತೇಗಿತು; ಅವರಿತ್ತ ಹರಕೆ ಕೇಳಿ ನನಗೆನಿಸಿತು— “ಇಂದು ಸತ್ಯನಾರಾಯಣನಿಗೆ ಸಂತೋಷ ವಾಗುವುದು ಖಂಡಿತ!”

ದಾಳಿಂಬದ ಹಣ್ಣಿನೊಳಗಿನ ಪ್ರತಿಯೊಂದು ಕಾಳು ಮಧುರ ರಸದಿಂದ ತುಂಬಿರುವಂತೆ ಇಂದಿನ ಕ್ಷಣಕ್ಷಣವೂ ಆನಂದದಿಂದ ತುಂಬಿದುದಾಗಿತ್ತು. ಕಬ್ಬು ಗರಿಯಿಂದ ಕೆಳಕ್ಕೆ ಹೆಚ್ಚು ಹೆಚ್ಚು ಸಿಹಿಯಾಗಿರುವಂತೆ ಪ್ರಭಾತ ಕಾಲದಿಂದಲೂ ಇಂದಿನ ದಿನವು ಹೆಚ್ಚು ಹೆಚ್ಚು ಸುಖಕರವಾಗಿ ಪರಿಣಮಿಸುತ್ತ ನಡೆ ದಿದ್ದಿತು. ಎಲ್ಲ ಕೆಲಸ ಬೇಗನೆ ಮುಗಿಯಲು ಮಧ್ಯರಾತ್ರಿ ಮೀರಿತು, ಹಾಗೂ ಮನೆಯ ಮಂದಿ ಮಲಗಲು ತೆರಳಿತು. ಮನೆಯಲ್ಲಿ ಎಲ್ಲಿ ನೋಡಿದಲ್ಲಿ ಲಖಲಖಾಟ! —ಬೆಳಕ್ರೆ ಬೆಳಕು!! ಸತ್ಯನಾರಾಯಣನ ಪೂಜೆ! ದೊಡ್ಡ ದೊಡ್ಡ ಸಮೆಯುಗಳು ರಾತ್ರಿಯೆಲ್ಲ ದೊಡ್ಡವಾಗಿ ಉರಿಯುತ್ತಿದ್ದವು!

ಆ ಉಜ್ವಲ ಪ್ರಕಾಶ ನೋಡಿ ನನ್ನ ಮನಸ್ಸು ಆನಂದದಿಂದ ಉಕ್ಕೇರಿತು! ಉಕ್ಕೇರಿದ ಮನಸ್ಸು ಆಮೆಯಂತೆ ಕೈಕಾಲು ಮುದುಡಿಸಿಕೊಂಡು ಸುಮ್ಮನೆ ನಿದ್ದೆಹೋಗಬಹುದೇ? ರಾತ್ರಿ ಸಮಯದಲ್ಲಿ ಜಗತ್ತೆಲ್ಲ ನಿದ್ರಿಸುವುದು—ಆದರೆ ರಾತ್ರಿಯ ಮಾತ್ರ ಎಚ್ಚತ್ತಿರುವಳು! —ಹಾಗೆಯೆ ನನಗಾಯಿತು. ತೀರ ಹಾಗೆಯೆ ಎಚ್ಚರಿಕೆಯಿಂದಿರಬೇಕು ಎಂದೆನಿಸಿತು ನನಗೆ ಮನಸ್ಸಿನಲ್ಲಿ ವಿಚಾರ ಒಮ್ಮೆಲೆ ಬಂದಿತು— "ಮಹಡಿಗೆ ಹೋಗಿ, ಈ ಢಾಳಿಸುವ ಪ್ರಕಾಶದಲ್ಲಿ ಕನ್ನಡಿಯಲ್ಲಿ ತನ್ನ ರೂಪು ನೋಡಿಕೊಳ್ಳಬೇಕು!" ಎಂದು. ನನ್ನ ತಾಯಿ ನನಗೆಂದೆಂದಿಗೂ ಎನ್ನುತ್ತಿದ್ದಳು— "ಪ್ರೇಮಲೆ! ನಿನ್ನ ಹೆಸರಿಗಿಂತಲೂ ನೀನೆಷ್ಟೋ ಸುಂದರಳಾಗಿರುವೆ!" ಎಂದು. ಆದರೆ ನನಗೆನಿಸುತ್ತಿತ್ತು— "ಎಷ್ಟೆಂದರೂ ಅವಳು ತಾಯಿ! ಮಮತೆಯ ಕಣ್ಣಿಗೆ ಚೆಲುವೆ ಕಾಣುತ್ತಿರಬಹುದು!" ಆದರೆ ಇಂದು ಮಾತ್ರ, ತಾಯಿ ಅನ್ನುತ್ತಿದ್ದಳೆಂತಲ್ಲ, ನನಗೆ ನಾನೇ ಚೆಲುವೆಯಾಗಿ ತೋರುತ್ತಿದ್ದುದರಿಂದ ಮಹಡಿಯ ಮೇಲಿನ ನಿಲುಗನ್ನಡಿಯಲ್ಲಿ ನನ್ನನ್ನು ನಾನೇ ನೋಡಿಕೊಳ್ಳತೊಡಗಿದೆ. ಸ್ವಚ್ಛವಾದ ಆ ದೊಡ್ಡ ಕನ್ನಡಿಯಲ್ಲಿ ಬಿದ್ದ ನನ್ನ ಪ್ರತಿಬಿಂಬ ನೋಡಿ ನನಗೆ ಸೋಜಿಗವೆನಿಸಿತು. ನಾನು ಉಟ್ಟಿದ್ದ ಕೇಶರ ವರ್ಣದ ಪೀತಾಂಬರ ಹಾಗೂ ಜಾಂಬಳಿ ವರ್ಣದ ಕುಪ್ಪುಸ. ಕೇಶರವರ್ಣದ ಪೀತಾಂಬರದ ಛಾಯೆ ನನ್ನ ಗೌರವರ್ಣದ ಮೇಲೆ ಬಿದ್ದು ನನ್ನ ಕಾಂತಿ ಇನ್ನಷ್ಟು ವಿಕಸಿತವಾಗಿತ್ತು. ಜಾಂಬಳಿ ಬಣ್ಣದ ಕುಪ್ಪುಸದ ಮೇಲೆ ಮುತ್ತಿನ ಆಭರಣಗಳು ಹೊಳೆಯುತ್ತಿದ್ದವು. ಕರ್ಣಕುಂಡಲಗಳು ಮಿನುಗುತ್ತಿದ್ದವು. ಬಾಜೂಬಂದಗಳು ತಳತಳ ಮಿರುಗುತ್ತಿದ್ದವು. ಏನು ನನ್ನೀ

ಅಪ್ರತಿಮ ಸ್ವರೂಪ! —ನನ್ನ ಸ್ವರೂಪದ ಅಭಿಮಾನವೆನಿಸಿತು ನನಗೆ! ನನ್ನ ಸ್ವರೂಪದ ಭೂಷಣದ ಮುಂದೆ ಲಕ್ಷ್ಮಿಯ ಸಂಪತ್ತೂ ನನಗೆ ಸಪ್ಪಗೆನಿಸಿತು. ನನ್ನ ಸೌಂದರ್ಯವು ನನ್ನನ್ನು ಮೋಹಗೊಳಿಸಿತು; ಮುಗ್ಧಗೊಳಿಸಿತು; ಸೌಂದರ್ಯ ನಿರೀಕ್ಷಣೆಯಲ್ಲಿ ಮಗ್ನಳಾಗಿ ನಾನು ಅಲ್ಲಿಯೇ ಒರಗಿದೆ.

"ಪ್ರೇಮಲೇ!" ಎಂಬ ಅಪರಿಚಿತ ಸ್ವರದ ಕರೆಯು ಆಕಸ್ಮಾತ್ತಾಗಿ ಕೇಳಬಂದಿತು. ನಾನು ಗೊಂದಲಗೆಟ್ಟು ಹೋಗಿ, ಭೀತಿಯಿಂದ ಕೇಳಿದೆ— "ಯಾರದು?" ಪ್ರತ್ಯುತ್ತರ ಬಂದಿತು —"ಮಾಟಗಾರ!" ಹೊಟ್ಟೆಯೊಳಗಿನ ಕರುಳು ಹೊರಗೆ ಬಿದ್ದಂತೆ ನನಗಾಯಿತು. ತುಸು ಕೂಡ ಮೈ ಕೈ ಅಲ್ಲಾಡಿಸದೆ, ಅತ್ತಿತ್ತ ನೋಡದೆ, ನೇರವಾಗಿ ಮುಂದೋಡಬೇಕೆಂದು ಎದ್ದು ಧಾವಿಸಬೇಕೆನ್ನುವಷ್ಟರಲ್ಲಿ ನನ್ನ ಕಾಲು ಮುಂದೇಳದಾಯಿತು; ಅಡಿಯಿಡುವ ಶಕ್ತಿಯೇ ಹರಣವಾಯಿತು. ಮಾಟಗಾರನು ಮುಂದಕ್ಕೆ ಅಡಿಯಿಟ್ಟು ನನ್ನ ಕೈ ಗಟ್ಟಿಯಾಗಿ ಹಿಡಿದನು. ದೃಷ್ಟಿಗೆ ದೃಷ್ಟಿ ತಾಕಬಾರದೆಂದು ನಾನು ಕಣ್ಣು ಗಟ್ಟಿಯಾಗಿ ಮುಚ್ಚಿಕೊಂಡೆ ಹಾಗೂ "ಧಾವಿಸಿ ಬಾ ನಾರಾಯಣಾ!" ಎಂದು ಆರ್ತ ಧ್ವನಿಯಿಂದ ಪ್ರಾರ್ಥಿಸಿದೆ. ನನ್ನ ಕರೆಗೆ ಓ ಕೊಡುತ್ತ, ಮಾಟಗಾರನು ನನ್ನ ಮುಂದೆ ನಿಂತನು. ಕಣ್ಣು ತೆರೆದು ನೋಡಿದರೆ— ನಾನು ಅನುದಿನ ಪೂಜಿಸುತ್ತಿರುವ ನನ್ನ ಪ್ರಭು—ನಾರಾಯಣ!! ನಾರಾಯಣನ ಚರಣಕ್ಕೆರಗಲು ನಾನು ಕೆಳಕ್ಕೆ ಬಾಗುತ್ತಿರುವಾಗ ಆತನು ಕೈ ಕೊಟ್ಟು ನನ್ನನ್ನೆಬ್ಬಿಸಿದ ಹಾಗೂ ತನ್ನ ಕರಗಳನ್ನು ನನ್ನ ಹೆಗಲ ಮೇಲಿರಿಸಿ ನುಡಿದ— "ಪ್ರೇಮಲೇ! ನನ್ನ ಕರವನ್ನು ನೀನು ನಿನ್ನ ಪ್ರೇಮದಿಂದ ಪಡೆದಿರುವೆ. ಅದು

ದೂರವಾಗಲಾರದು. ಪ್ರೇಮದಿಂದ ದೊರೆತವು ಸೌಖ್ಯ ನಿರಂತರವಾಗಿ ಉಳಿಯಲೇಬೇಕೆಂಬುದು ಸನಾತನ ಕಾನೂನು —ಅದನ್ನು ನೀನು ಮುರಿಯಲಾರೆ ! ”

ನಾರಾಯಣನ ಕೈಯತ್ತ ನನ್ನ ಗಮನ ಹೋಗಿ, ನಾನು ವಿಸ್ಮಿತಳಾಗಿ ಕೇಳಿದೆ— “ ಪ್ರಭೋ! ನಿನ್ನೀ ಕೈಗೆ ಏನಾಗಿರುವುದು ? ” ನಾರಾಯಣನು ನನ್ನನ್ನು ನಟ್ಟಗಣ್ಣಿನಿಂದ ನೋಡುತ್ತ ಎಂದನು— “ ನೀನು ಆ ಬಡ, ನಿರಪರಾಧಿ ಧೇನುವಿಗೆ ಬಡಿಗೆಯಿಂದ ಹೊಡೆದದ್ದರ ಬಾಸಳು ಇದೋ -ಇಲ್ಲಿ ಮೂಡಿವೆ! ” ನೀರಿನಲ್ಲಿ ಮಣ್ಣಿನ ಹೆಂಟೆ ಕರಗಿಹೋಗುವಂತಾಯಿತು ನನ್ನ ಗತಿ! ನನಗೇನೋ ಮಾತನಾಡುವುದಿತ್ತು, ಆದರೆ ಬಾಯಿಂದ ಉದ್ಗಾರವೇ ಬರಲೊಲ್ಲದು. ನಾರಾಯಣನೆಂದನು— “ ಪ್ರೇಮಲೇ! ನನ್ನ ಸಲುವಾಗಿ ನಿರಪರಾಧಿಯನ್ನು ನೋಯಿಸಿದರೆ ಆ ನೋವು ನನಗಾಗುವುದು ! ಹಾಗೂ ನನ್ನ ಸಲುವಾಗಿ ಅವರನ್ನು ಸಂತೋಷಪಡಿಸಿದರೆ ಆ ಸಂತೋಷ ನನಗಾಗುವುದು ! ”

ನಾರಾಯಣನ ದರ್ಶನದಿಂದ ನನ್ನ ಚಕ್ಷುಗಳು ತಿಳಿಗೊಂಡವು. ಹಾಗೂ ನನಗೆಲ್ಲವೂ ಸ್ಪಷ್ಟವಾಗಿ ಕಾಣತೊಡಗಿತು. ನನ್ನ ಗೌರಕಾಯವು ನೀಲವರ್ಣವಾಗಿ ತೋರತೊಡಗಿತು— ನಾನು ಆಶ್ಚರ್ಯದಿಂದ ದಿಙ್ಮೂಢಳಾದೆ— ಹಾಗೂ ಅರ್ಥಪೂರ್ಣ ನಯನದಿಂದ ನಾರಾಯಣನನ್ನು ನೋಡತೊಡಗಿದೆ. ನಾರಾಯಣನೆಂದ— “ ಪ್ರೇಮಲೇ! ಸ್ವಚ್ಛ ಶುಭ್ರ ವಸ್ತ್ರವನ್ನು ನೀಲವರ್ಣದಲ್ಲಿ ಅದ್ದಿದರೆ, ಅದು ನೀಲವರ್ಣವನ್ನೇ ಹೊಂದುವುದು. ನೀಲವರ್ಣವಾಗದ ಹೊರತು ಅದಕ್ಕೆ ವೇರೆ ಸ್ಥಿತಿಯೇ ಇಲ್ಲ. ” ........ ನಾರಾಯಣನು ಮುಂದು

ಬೆರಿಡೆಂದನು— “ಏನು ನಿನ್ನ ಮನದಲ್ಲಿ ದೃಢವಾಗಿದೆಯೋ ಅದೇ ನಿನ್ನ ಹೃದಯದಲ್ಲಿ ಮೂಡಿತು; ಏನು ಮೂಡಿತೋ ಅದೇ ನಿನಗೆಂದು ಸಂದಿತು! ನಿನ್ನ ಅಂತರ್ಯದಲ್ಲಿ ಮೂಡಿದ ನನ್ನ ಚಿತ್ರದ ಪ್ರತಿಚಿತ್ರವೇ ನಿನ್ನಿಂದಿನ ಈ ಸ್ವರೂಪವಹುದು! ಸಾಗರನಲ್ಲಿ ಬೆರೆತ ಗಂಗೆ ಸಾಗರನಿಂದ ಭಿನ್ನಳಾಗಲಾರಳು. ಹಾಗೂ ಸಾಗರನಾದರೂ ಮಿಲನ ಹೊಂದಿದ ಗಂಗೆಯಿಂದ ಭಿನ್ನನಾಗಲಾರನು. ಇದು ವಿಶ್ವದ ಮಾಟಗಾರನ ಮಾಟ ವಾಗಿದೆ. ಈ ಮಾಟಗಾರಿಕೆಯಿಂದಲೇ ನೀನು-ನಾನು ಏಕ ರೂಪರಾದೆವು— ಅಭಿನ್ನರಾದೆವು.”

ದೈದೀಪ್ಯಮಾನ ಸೂರ್ಯನೆದುರಿಗೆ ಕಣ್ಣು ಮುಚ್ಚಿ ನಿಲ್ಲು ವಂತಾಯಿತು ನನಗೆ ಸಮುದ್ರದಲ್ಲಿ ಮುಳುಗುವ ವಸ್ತು ತನ್ನ ತೂಕದ ಅರಿವು ಬಿಟ್ಟುಕೊಟ್ಟು ಮುಳುಗುವಂತಾಯಿತ್ತು ನನಗೆ.

ಹಾಲಿನಲ್ಲಿ ಸಕ್ಕರೆ ಬೆರೆತರೇನು? ಇಲ್ಲವೆ ಹಾಲು ಸಕ್ಕರೆ ಯನ್ನು ಸೇವಿಸಿದರೇನು? ಎರಡರ ಪರಿಣಾಮವು ಒಂದೇ! “ಮಧುರಂ ಮಧುರಂ.”

ಅತೀತನಾಗಿರಬೇಕು ಈ ಧನಿಕನು! ವರಾಂಡದ ಮೇಲೆ ಅಡಿಯಿಟ್ಟೊಡನೆ ಇಬ್ಬರು ದ್ವಾರಪಾಲಕರು ಹುಬ್ಬುಗಂಟಿಕ್ಕಿ, ಅವನ ಮೈಮೇಲೆ ಏರಿಬಂದಂತೆ ಮಾಡಿ, ಯಾಕೆ ಬಂದಿರೆಂದು ಕೇಳಿದರು. ರತ್ನಶೆಟ್ಟಿಯು ಶಾಂತ ರೀತಿಯಲ್ಲಿ, ಧನಿಕನಿಗೆ ರತ್ನಗಳನ್ನು ತೋರಿಸಲು ತಾನು ಬಂದದ್ದಾಗಿ ಹೇಳಿದನು. ದ್ವಾರಪಾಲಕರು ಒಳಗೆ ಸುದ್ದಿ ಮುಟ್ಟಿಸಿದರು. ಧನಿಕನಿಂದ ಕರೆ ಬರಬಹುದೆಂದು ರತ್ನಶೆಟ್ಟಿಯು ಅಲ್ಲಿಯೇ ದಾರಿಕಾಯುತ್ತ ನಿಂತನು. ಪಂಜೆಯುಟ್ಟು ಸಣ್ಣ ದುಪ್ಪಟಿ ಹೆಗಲಮೇಲೆ ಹೊದೆದ ಸಾದಾ ಉಡುಪುತೊಡಪಿನ ರತ್ನವರ್ತಕನಿಗೆ ಆ ಶ್ರೀಮಂತ ಮನೆಯೊಡೆಯನ ದ್ವಾರಪಾಲಕರು ಒಳಗೆ ಕಾಲಿ-ಡಲು ಹೇಗೆ ಅನುವಿತ್ತಾರು? ರತ್ನಶೆಟ್ಟಿ ಪಾವಟಿಗೆ ಇಳಿದು ಕಮಾನಿನಲ್ಲಿ ಬಂದು ನಿಂತನು. ಅದು ಸ್ನಾನದ ಸಮಯ ಧನಿಕನು ಸ್ನಾನ ಮಾಡಲು ಹೋಗಿರಬಹುದೆಂದು ಭಾವಿಸಿ ರತ್ನವ್ಯಾಪಾರಿಯು ಹಾಗೇ ನಿಂತನು. ಗಳಿಗೆ ಹೋದವು, ಪಳ ಸರಿದವು, ಗಂಟೆ ಜಾರಿದವು—ಆದರೂ ಆತನು ನಿಂತೇ ಇದ್ದನು. ಧನಿಕನ ಸ್ನಾನವಾಯಿತು, ಭೋಜನವೂ ಆಯಿತು, ಭೋಜನದ ತರುವಾಯ ವಿಶ್ರಾಂತಿಗಾಗಿ ಧನಿಕನು ಮಂಚಕದ ಮೇಲೆ ಒರಗಿದನು. ಅಲ್ಲಿಯೇ ಆತನಿಗೆ ನಿದ್ರೆಯೂ ಹತ್ತಿತು! ಆತನು ಗೊರಕೆ ಹೊಡೆಯುತ್ತಿದ್ದುದು ಸಹಜವಾಗಿಯೇ ಹೊರಗೆ ಕೇಳ ಬರತೊಡಗಿತು! ಚತುರ ರತ್ನವ್ಯಾಪಾರಿಯ ಗಮನಕ್ಕೆ ಈ ಸಂಗತಿ ಬಂದು, ಘೋರ ನಿದ್ರೆಯಲ್ಲಿ ಗೊರಕೆ ಹೊಡೆಯುತ್ತಿರುವ ಆ ಧನಿಕನ ಮಹಾಸದಸದತ್ತ ತಿರಸ್ಕಾರದ ದೃಷ್ಟಿಕ್ಷೇಪ ಮಾಡಿ, ಆ ಕಡೆಗೆ ಬೆನ್ನು ತಿರುವಿ ಅಲ್ಲಿಂದ ಹೊರಳಿದನು. ಆತನ ತಲೆಯಲ್ಲಿ ವಿಚಾರಗಳ ಸಂತೆ ನೆರೆಯಿತು. ಬಾಗಿಲಲ್ಲಿ

ಬೆಲೆಯುಳ್ಳ ರತ್ನಗಳು ಬಂದಿರುವಾಗ ಅವನ್ನು ನೋಡುವ ಉತ್ಸುಕತೆಯೂ ಇಲ್ಲದ ಹಾಗೂ ಹೆರರನ್ನು ಬಾಗಿಲಲ್ಲಿ ಕಾಯ ಹಚ್ಚಿ, ತಾನು ಘೋರ ನಿದ್ರೆಯಲ್ಲಿ ಉರುಳಾಡುವ ಈ ಧನಿಕನು ಎಂತಹನು? ಈ ಸಂಪತ್ತು ಅವನ ಸುಖಕ್ಕಾಗಿರದೆ, ದುಃಖಕ್ಕೇ ಕಾರಣವಾಗಿದೆ; ಅವನ ತಾಮಸಗುಣ ಬೆಳೆಸುವುದಕ್ಕಾಗಿಯೇ ಇದೆ; ಈ ಧನವು ಅವನ ಮಿತ್ರನಾಗಿರದೆ ಶತ್ರುವಾಗಿದೆಯೆಂಬುದು ಆ ದುರ್ದೈವಿ ಧನಿಕನಿಗೆ ತಿಳಿಯಬಾರದೇ?—ಹೀಗೆಲಾ ವಟಗುಡುತ್ತ ರತ್ನಶೆಟ್ಟಿಯು ಬಾಗಿಲ ಫಡಕದವರೆಗೆ ಬಂದನು. ಹಾಗೂ ಬಾಗಿಲ ಫಡಕದೊಳಗಿಂದ ಹೊರಬೀಳುತ್ತಿರುವಾಗ ತನ್ನಷ್ಟಕ್ಕೆ ಅಂದುಕೊಂಡ—"ನಿಜವಾದ ಧನಿಕನ ಹೊರತಾಗಿ ನಿಜವಾದ ರತ್ನಗಳ ಬೆಲೆಯು ಇನ್ನಾರಿಗೆ ತಿಳಿಯಬೇಕು?"

ತರುವಾಯ ರತ್ನವರ್ತಕನು ಬೇರೆ ಕಡೆಗೆ ಹೊರಟನು. ನೀಟಾಗಿ ಎತ್ತರ ಬೆಳೆದ ಗಿಡಗಳು ಸಾಲಾಗಿ ನಿಂತಿದ್ದವು— ಆ ದಿಸೆಯತ್ತ ಹೊರಳಿದನು. ಹೊರಗಿನ ಗೇಟು ದಾಟಿ ಒಳಗೆ ಹೊಕ್ಕೊಡನೆ ಒಂದು ಸುಂದರ ಉಪವನವನ್ನು ಕಂಡನು. ಅಲ್ಲಿ ಜಾಜಿಮಲ್ಲಿಗೆ-ಸೂಜಿಮಲ್ಲಿಗೆಯ ಮಂಟಪಗಳು. ಹೂಗಳ ಭಾರದಿಂದ ಅವು ಪರಿಶುಭ್ರವಾಗಿ ಕಂಗೊಳಿಸುತ್ತಿದ್ದವು. ಎತ್ತೆತ್ತಲೂ ಹೂಗಂಪು ಇಡುಗಿತ್ತು. ಮಂಟಪಗಳೊಳಗೆ ಕೂಡಲು ಕಲ್ಲಿನ ಆಸನಗಳಿದ್ದವು. ಅಲ್ಲಲ್ಲಿ ಬಣ್ಣಬಣ್ಣದ ಬಳ್ಳಿಗಳು ಹಬ್ಬಿದ್ದವು. ತುಂಬಾ ಅರಳಿದ ಬಟ್ಟಗುಲಾಬಿ ಹೂಗಳು ತಮ್ಮ ಸೌಂದರ್ಯ ಪ್ರದರ್ಶಿಸಲೆಂಬಂತೆ ನೊಗವೆತ್ತಿ ಚೆಲುವಿಕೆಯ ಒಯ್ಯಾರದಲ್ಲಿ ನಿಂತಿದ್ದವು. ಹೂಗಿಡಗಳ ಟೊಂಗೆಗಳನ್ನು ಹವಣಿಯಾಗಿ ಕತ್ತರಿಸಿ, ಮಾಟಾಗಿ ಕಾಣುವಂತೆ ಮಾಡಿದ್ದರು. ಬಾಡಿದ ಹೂಗಳಾಗಲಿ, ಒಣಗಿದ ಇಲ್ಲವೆ ಉದುರಿಬಿದ್ದ ಎಲೆ

ಯಾಗಲಿ ತೋಟದಲ್ಲಿ ಕಾಣುತ್ತಿರಲಿಲ್ಲ. ಉಪವನದಲ್ಲಿಯ ಸ್ವಚ್ಛತೆ, ಅಲ್ಲಿಯ ಮನೋವೇಧಕ ರಚನೆ ಹಾಗೂ ಅಚ್ಚುಕಟ್ಟು ನೋಡಿ ಮನೆಯೊಡೆಯನ ರಸಿಕತೆಯ ಬಗ್ಗೆ ರತ್ನಶೆಟ್ಟಿಗೆ ಕೌತುಕವೆನಿಸಿತು. ಹೂದೋಟದಲ್ಲಿ ಅಡ್ಡಾಡಿ, ಪಾವಟಿಗೆ ಹತ್ತಿ ರತ್ನಶೆಟ್ಟಿ ಬಂಗ್ಲೆಯ ವರಾಂಡದಲ್ಲಿ ಬಂದನು. ದ್ವಾರ ಪಾಲಕರು ಕೊಂಚ ತಲೆವಾಗಿ, ವರ್ತಕನಿಗೆ ಕುರ್ಚಿ ಕೊಟ್ಟು ಕೂಡಲು ಹೇಳಿ, ಅವನು ಬಂದ ಉದ್ದಿಶ್ಯ ವಿಚಾರಿಸಿದರು. ತಾನು ರತ್ನಗಳ ವ್ಯಾಪಾರಕ್ಕಾಗಿ ಬಂದಿರುವುದನ್ನು ಆತನು ತಿಳಿಸಿದನು. ದ್ವಾರಪಾಲಕರು ಒಳಗೆ ವರದಿ ಮುಟ್ಟಿಸಿದರು. ಮನೆಮಾಲಿಕನು ನಸುನಗುತ್ತ ಹೊರಗೆ ಬಂದನು. ಜರಿಯಂಚಿನ ತೆಳ್ಳಗಿನ ಬೆಳ್ಳಗಿನ ಧೋತ್ರದ ಅಂಚು ಕೆಳಗೆ ಹಾಸಿದ ಬೆಲೆ ಯುಳ್ಳ ರತ್ನಗಂಬಳಿಯ ಮೇಲೆ ಹೊರಳಾಡುತ್ತಿದೆ; ಮೈಯಲ್ಲಿ ನಯವಾದ ತಿಳಿಗುಲಾಬಿ ಬಣ್ಣದ ರೇಶ್ಮೆಯ ಶರ್ಟು. ಮಾಲಿಕನು ಎರಡೂ ಕೈಜೋಡಿಸಿ ವರ್ತಕನಿಗೆ ಸ್ವಾಗತವಿತ್ತಾಗ ಬೆರಳುಗಳೊಳಗಿನ ಹರಳುಗಳ ಉಂಗುರಗಳು ಹೊರಗಿನ ಬೆಳಕಿನಿಂದ ಚಳಕ್ಕನೆ ಹೊಳೆದವು. ಸಲಿಗೆಯ ಗೆಳೆಯನು ಮನ ಬಿಚ್ಚಿ ಮಾತನಾಡುವಂತೆ ಶ್ರೀಮಂತನು ಮಾತನಾಡತೊಡಗಿದನು. ಹಿಂದಿನ ಹಳೆಯ ಸಂಗತಿಗಳನ್ನೆಷ್ಟೋ ಆತ ಹೇಳತೊಡಗಿದನು. ಎಷ್ಟೋ ಊರುಗಳ ಬಗ್ಗೆ ಮಾಹಿತಿ ಕೇಳಿದನು. ಸುಖ ಸೌಂದರ್ಯ ಸಾಧಕವಾದ ಹಲವಾರು ವಸ್ತುಗಳು ಎಲ್ಲೆಲ್ಲಿ ದೊರಕುವವೆಂದು ವಿಚಾರಿಸಿದನು. ಎಷ್ಟೋ ಹೊತ್ತು ಮಾತುಕತೆಯಲ್ಲಿ ಕಳೆದ ಮೇಲೆ ವರ್ತಕನು ರತ್ನಗಳ ಬಗ್ಗೆ ಪ್ರಸ್ತಾಪ ಮಾಡಿದನು. ಶ್ರೀಮಂತನು ಸಣ್ಣ ಮಗುವಿನಂತೆ ಒಮ್ಮೆಲೆ ಎದ್ದುನಿಂತು, ಬಲಗೈಯ ಬೆರಳಿನಿಂದ ಚಿಟಿಕೆ ಬಾರಿಸಿ,

ಹುಬ್ಬೇರಿಸಿ, ಕಣ್ಣು ಅರಳಿಸಿ, “ ಹೋ! ಹೋ! ಎಲ್ಲಿವೆ— ರತ್ನಗಳನ್ನು ತೋರಿಸಿರಿ! ಉತ್ತಮ ರತ್ನಗಳನ್ನು ನಾನು ಕೊಂಡುಕೊಳ್ಳಬೇಕೆಂದಿದ್ದೇನೆ ” ಎಂದನು.

ರತ್ನಶೆಟ್ಟಿಯು ರೇಶ್ಮೆವಸ್ತ್ರದಲ್ಲಿ ಸುತ್ತಿದ ರತ್ನಗಳ ಮಾಟಾದ ಪೆಟ್ಟಿಗೆಯನ್ನು ಹೊದೆದ ವಸ್ತ್ರದ ಒಳಗಿನಿಂದ ತೆಗೆದನು. ಪೆಟ್ಟಿಗೆ ತೆಗೆದೊಡನೆ ಒಳಗಿನ ರತ್ನಗಳ ಕಿರಣಗಳು ಹೊರಗೆ ಎಷ್ಟೋ ದೂರ ಚೆಲ್ಲಿದವು. ಅದನ್ನು ನೋಡಿ ಶ್ರೀಮಂತನು ಆಶ್ಚರ್ಯಚಕಿತನಾದನು. ಆತನ ಲಕ್ಷ್ಯವು ತನ್ನ ಉಂಗುರಗಳೊಳಗಿನ ಹರಳುಗಳ ಕಡೆಗೆ ಹೋಯಿತು. ಸೂರ್ಯನ ಮುಂದೆ ಮಿಂಚುಹುಳಗಳ ಬೆಳಕಿನಂತೆ ತನ್ನ ಬೆರಳುಂಗುರಗಳೊಳಗಿನ ಹರಳುಗಳ ಬಗ್ಗೆ ಶ್ರೀಮಂತನಿಗೆನಿಸಿತು. ಆತನು ಯೋಚನೆ ಮಾಡತೊಡಗಿದನು— “ಕಾಣಲು ಸಾದಾ ಸೀದಾ ಆಗಿರುವ ಈ ವರ್ತಕನು ಇಂಥ ಅಮೌಲ್ಯ ರತ್ನಗಳನ್ನು ಎಲ್ಲಿ ಸಂಪಾದಿಸಿರಬಹುದು ? ಇಂತಹ ರತ್ನಗಳ ಕಣಿ ಎಲ್ಲಿರಬಹುದು? ಅಲ್ಲಿಗೆ ಹೇಗೆ ಹೋಗಲು ಬಂದೀತು? ” ಎಂದು ಮುಂತಾಗಿ ವಿಚಾರ ತರಂಗಗಳಲ್ಲಿ ಮಗ್ನನಾಗಿರುವಾಗ ರತ್ನಶೆಟ್ಟಿಯು ಒಮ್ಮೆಲೆ ಕೇಳಿದನು— “ಹಾಂ, ಹೇಳಿರಿ ಶ್ರೀಮಂತರೇ! ತಮಗೆ ಯಾವ ರತ್ನ ಒಪ್ಪಿಗೆಯಾಯಿತು? ಯಾವುದು ಬೇಕು?” ಶ್ರೀಮಂತನು ಎಚ್ಚರಗೊಂಡು, ಒಂದು ಅಷ್ಟಕೋನ ರತ್ನದ ಕಡೆಗೆ ಬೊಟ್ಟು ಮಾಡಿ ತೋರಿಸಿ ಎಂದನು— “ ನನ್ನ ವಿಪುಲ ಸಂಪತ್ತಿಯ ಒಂದು ಚತುರ್ಥಾಂಶ ಭಾಗವನ್ನು ಕೊಟ್ಟು ಈ ರತ್ನ ಕೊಳ್ಳಲು ನಾನು ಸಿದ್ಧನಿರುವೆ! ಅರ್ಧ ಭಾಗವನ್ನು ಸ್ವಂತಕ್ಕಾಗಿ, ನಾಲ್ಕರಲ್ಲಿ ಒಂದಂಶವನ್ನು ಈ ಸುಖಸಾಧನಗಳ ತಕ್ಕ ವ್ಯವಸ್ಥೆಗಾಗಿ, ಇನ್ನುಳಿದ ನಾಲ್ಕನೆಯ ಭಾಗವನ್ನು ಈ ರತ್ನಕ್ಕಾಗಿ ಕೊಡುವೆ!”

ರತ್ನ ಬಿಡಲೂ ಆರ, ಕೊಳ್ಳಲೂ ಆರ; ತನ್ನ ಜೀವನದ ಸುಖ ಸೌಕರ್ಯಗಳನ್ನೂ ತೊರೆಯಲಾರ— ಎಂಬೀ ಶ್ರೀಮಂತನ ಮನೋವೃತ್ತಿಯನ್ನು ನೋಡಿ ರತ್ನಶೆಟ್ಟಿಯು ಕ್ಷಣಮಾತ್ರ ಆತನನ್ನು ದಿಟ್ಟಿಸಿ ನೋಡಿ, ತನ್ನ ರತ್ನದ ಪೆಟ್ಟಿಗೆಯನ್ನು ಕಂಕುಳಲ್ಲಿರಿಸಿಕೊಂಡು ಹೊರಟುಬಿಟ್ಟನು. ಆವಾರದ ಗೇಟಿನೊಳಗಿಂದ ಹೊರಬೀಳುವಾಗ ತನ್ನಷ್ಟಕ್ಕೆ ಅಂದುಕೊಂಡನು– "ಕಲ್ಲಿಗಿಂತ ಹೆಂಟೆ ಮಿದು! ಆದರೂ ಹೆಂಟೆ ಹೆಂಟೆಯೇ! ಮುಂಚಿನ ಆ ತಮೋಗುಣಿ ಶ್ರೀಮಂತನಿಗಿಂತ ಈ ರಜೋಗುಣಿ ಶ್ರೀಮಂತನು ಎಷ್ಟೋ ಒಳ್ಳೆಯವ! ಆದರೂ ರಾಜಸನೇ! ಪ್ರದರ್ಶನದ ಅವಾಸ್ತವ ಅಭಿರುಚಿ ಈತನದು! ವಸ್ತುಸಂಗ್ರಹದ ಕಡೆಗೇ ಈತನ ಲಕ್ಷ್ಯ! ಸಂಪಾದನೆಯ ಕಡೆಗೇ ಈತನ ದೃಷ್ಟಿ! ತಕ್ಕ ಬೆಲೆ ಕೊಟ್ಟು ಕೊಳ್ಳುವುದು ಈತನಿಗೆ ಗೊತ್ತೇ ಇಲ್ಲ! ನಿಜವಾದ ರತ್ನದ ಬೆಲೆ ಈತನಿಗೆ ತಿಳಿಯುವುದೆಂತು?"

ರತ್ನಗಳನ್ನು ಕೊಳ್ಳಬಹುದಾದ ಇನ್ನು ಒಬ್ಬನೇ ಒಬ್ಬ ಶ್ರೀಮಂತನಿದ್ದನು. ಅತ್ತಕಡೆಗೆ ರತ್ನಶೆಟ್ಟಿಯು ಹೊರಳಿದನು. ನಗರದ ಒಂದು ತುದಿಗೆ ಒಂದು ಸಣ್ಣ ಗೇಟು ಇದ್ದಿತು. ವರ್ತಕನು ಒಳಹೊಕ್ಕು ನೋಡುತ್ತಾನೆ— ಅಲ್ಲಿಯೊಂದು ರಮಣೀಯ ಉಪವನ. ತರುಲತೆಗಳ ಸಮ್ಮೇಲನವೇ ಎನಿಸುವಂತಿತ್ತು. ಒಳಗೆ ಕಾಲಿಟ್ಟೊಡನೆ ಕಾಡು ಹೂಬಳ್ಳಿಗಳು ತಮ್ಮ ಸುಕುಮಾರ ಕರಗಳಿಂದ ಬಕುಲದ ಗಿಡವನ್ನು ಅಪ್ಪಿಕೊಂಡು ಹಬ್ಬಿದುದನ್ನು ಕಂಡನು. ಹೆಸರುದೆಸೆ ಹೇಳಲು ಬಾರದ ಬಗೆಬಗೆಯ ಕಾಡುಹೂಗಳೂ ಸೇವಂತಿ, ಗುಲಾಬಿ, ಸಂಪಿಗೆ, ಮಲ್ಲಿಗೆ ಮೊದಲಾದ ಕಸಿಮಾಡಿ ಹಚ್ಚಿದ ಹೂಗಳೂ ಹತ್ತಿರ ಹತ್ತಿರ ಬೆಳೆದು ನಯನಮನೋಹರವಾಗಿದ್ದವು. ರತ್ನ

ಶೆಟ್ಟಿ ಕುತೂಹಲದಿಂದ ನೋಡುತ್ತ ಮುಂದೆ ಸಾಗಿದಾಗ ಸನಿಹ ದಲ್ಲಿಯೇ ಬೆಳೆದು ನಿಂತ ಪಾರಿಜಾತವೃಕ್ಷವು ತನ್ನ ಕೋಮಲ ಧವಲ ಪುಷ್ಪಗಳ ವೃಷ್ಟಿಮಾಡಿ ಸ್ವಾಗತವಿತ್ತಿತು. ಮನೆಯ ಹೆಬ್ಬಾಗಿಲಲ್ಲಿ ನೀಲಿ ಹೂಬಳ್ಳಿ ಬೆಳೆದ ಕಮಾನಿದ್ದಿತು. ಅಲ್ಲಿ ರತ್ನಶೆಟ್ಟಿ ಹೋದೊಡನೆ ದ್ವಾರಪಾಲಕರು ವಿನಯದಿಂದ ಅವ ನನ್ನು ಪಡಸಾಲೆಯಲ್ಲಿ ಕರೆದುಕೊಂಡು ಹೋದರು. ಅಲ್ಲಿ ಶ್ರೀಮಂತನು ಸುಖಾಸೀನನಾಗಿದ್ದನು. ಪ್ರಸನ್ನವದನದಿಂದ ವರ್ತಕನನ್ನು ನೋಡಿ, ಅವನು ಬಂದ ಉದ್ದಿಶ್ಯವನ್ನು ತಿಳಿದು ಕೊಂಡನು. ರತ್ನಶೆಟ್ಟಿ ದೂರದೂರ ಅಲೆದು ಬಂದುದನ್ನು ಊಹಿಸಿ, ಮೊದಲು ಮುಖ ಪಾದ ಪ್ರಕ್ಷಾಲನಕ್ಕೆ ನೀರು ಕೊಡಿಸಿ, ಲಿಂಬೆಯ ರಸದ ಪಾನಕಮಾಡಿ ಕೊಟ್ಟು ಉಪಚಾರ ಮಾಡಿದನು. ಪಾನಕವನ್ನು ಸೇವಿಸಿ ರತ್ನಶೆಟ್ಟಿಯು ಶಾಂತ ಮನಸ್ಸಿನಿಂದ ಶ್ರೀಮಂತನೊಡನೆ ಮಾತನಾಡತೊಡಗಿದನು. ವರ್ತಕನು ತನ್ನ ಚಿಕ್ಕಪೆಟ್ಟಿಗೆ ತೆರೆದು ರತ್ನಗಳನ್ನು ತೋರಿಸಿ ದೊಡನೆ ಶ್ರೀಮಂತನು ಕಡುಬೆರಗಾದನು. ಆ ರತ್ನಗಳ ಮೇಲೆ ಶ್ರೀಮಂತನ ದೃಷ್ಟಿ ನಟ್ಟುಬಿಟ್ಟಿತು. ಅಚಲದೃಷ್ಟಿಯಿಂದ ಆ ರತ್ನಗಳ ಬೆಲೆಯನ್ನು ಲೆಕ್ಕ ಮಾಡಹತ್ತಿದನು. ಸಮಾಧಾನ ದಿಂದ ರತ್ನಶೆಟ್ಟಿಯತ್ತ ದೃಷ್ಟಿಕ್ಷೇಪ ಮಾಡಿ, ಶ್ರೀಮಂತನು ನಡುವೆಯೇ ಎದ್ದು, "ಈ ಮಹಾನುಭಾವ ಅತಿಥಿಗಳ ಸತ್ಕಾರ ವನ್ನು ಚೆನ್ನಾಗಿ ಮಾಡಬೇಕು, ಅವರಿಗೆ ಭೋಜನ ಮಾಡಿಸ ಬೇಕು" ಎಂದು ಮನೆಯೊಳಗೆ ಅಪ್ಪಣೆ ಕೊಟ್ಟನು. ರತ್ನ ಶೆಟ್ಟಿಯು ಊಟ ಉಪಚಾರ ಮುಗಿದ ಮೇಲೆ ಮತ್ತೆ ಅವನೊ ಡನೆ ಸಂಭಾಷಿಸುತ್ತ ಕುಳಿತನು. ಶ್ರೀಮಂತನಂದನು— "ಈ ರತ್ನಗಳು ತೀರಾ ಅಸ್ಸಲ ಜಾತಿಯವು. ನನ್ನ ಸಕಲ ಸಂಪ

ತ್ತನ್ನು ಕೊಟ್ಟರೂ ಅವುಗಳ ಒಂದು ಕಣದ ಬೆಲೆಗೂ ಅದು ಸರಿಗಟ್ಟಲಾರದು.'' ಇದನ್ನು ಕೇಳಿ ರತ್ನಶೆಟ್ಟಿಯೆಂದನು— "ಶ್ರೀಮಂತರೇ, ನಿಮ್ಮೆಲ್ಲ ಸಂಪತ್ತಿಗಿಂತಲೂ ಈ ರತ್ನಗಳ ಮೌಲ್ಯವು ನಿಮಗೆ ಹೆಚ್ಚಿಗೆನಿಸುವುದೇ?'' "ನಿಃಸಂಶಯವಾಗಿ'' ಎಂದು ಶ್ರೀಮಂತನು ಉತ್ತರವಿತ್ತನು, "ತೇಜಸ್ವಿಯಾದ ರತ್ನಗಳಿಗೆ ತೇಜವಿಲ್ಲದ ಸಂಪತ್ತು ಎಣೆಯಾಗಬಲ್ಲುದೇ? ಈ ಅನರ್ಘರತ್ನಗಳ ಮುಂದೆ ನನ್ನ ಐಶ್ವರ್ಯದ ರಾಶಿಯೆಲ್ಲ ಕಳೆಗುಂದಿಬಿಡುತ್ತಿರುವಾಗ ಇದನ್ನು ಕೊಟ್ಟು ಅವುಗಳನ್ನು ನಾನೆಂತು ಕೊಳ್ಳಲಿ? ಶ್ರೇಷ್ಠವಸ್ತುವಿಗೆ ಶ್ರೇಷ್ಠ ಮೌಲ್ಯ ಕೊಡದೆ ಪಡೆಯುವುದು ಸಮರ್ಪಕ ವ್ಯವಹಾರವಲ್ಲ!'' ರತ್ನಶೆಟ್ಟಿಯು ಶ್ರೀಮಂತನ ಮಾತು ಕೇಳಿ ತಲೆದೂಗುತ್ತ, ಸಂತೋಷದಿಂದ ಅವನನ್ನು ಬೀಳ್ಕೊಂಡು ಹೊರಟನು. ಗೇಟಿನೊಳಗಿಂದ ಹೊರಬೀಳುವಾಗ ರತ್ನಶೆಟ್ಟಿ ತನ್ನಷ್ಟಕ್ಕೆ ಅಂದುಕೊಂಡನು— "ಈ ಸಾತ್ವಿಕ ಶ್ರೀಮಂತನು ನಿಜವಾದ ಧನಿಕನು! ಈತನ ಸಕಲ ಸಂಪತ್ತು ಇವನ ಸಾತ್ವಿಕತೆಯನ್ನು ಇನ್ನೂ ಹೆಚ್ಚಿಸುವುದೆಂಬುದು ದಿಟ! ಇವನ ವಿಪುಲಧನವು ಇವನ ಸನ್ಮಿತ್ರನೇ ಆಗಿದೆ— ಅದು ಆತನನ್ನು ಆನಂದದತ್ತ ಕರೆದೊಯ್ಯುತ್ತಿದೆ!''

ತನ್ನ ಅಮೌಲ್ಯ ರತ್ನಗಳೊಡನೆ ರತ್ನಶೆಟ್ಟಿ ಮುಂದೆ ಮುಂದೆ ನಡೆದನು. ಒಂದು ದಿವ್ಯನಗರಿ ತೇಜಃಪುಂಜ ತಾರಕೆಯಂತೆ ದೂರದಲ್ಲಿ ಎದುರಿಗೆ ಪ್ರಕಾಶಿಸಿತು. ಹತ್ತಿರ ಬಂದಾಗ, ಅಲ್ಲಿಯ ಪ್ರಾಸಾದಗಳು ಸ್ಫಟಿಕದಂತೆ ಲಕಲಕ ಹೊಳೆಯುತ್ತಿರುವುದು ಕಂಡಿತು. ಕಿಡಕಿ ಬಾಗಿಲುಗಳಿಗೆ ಬಂಗಾರದ ಕುಂದಣದಲ್ಲಿ ವಜ್ರಮಾಣಿಕ್ಯಗಳನ್ನು ಕೂಡಿಸಲಾಗಿದ್ದಿತು. ಪ್ರವೇಶದ್ವಾರದ

ಮೇಲೆ ಮುತ್ತಿನಲ್ಲಿ 'ಓಂ' ಕೆತ್ತಲಾಗಿದ್ದಿತು. ಅಲ್ಲಿಯ ಬೀದಿಗಳ ಹಾದಿಗಳ ಮೇಲೆ ಪಾದರಸವನ್ನೇ ಹಾಸಿದೆಯೆಂಬಂತೆ ಅವು ಥಳಥಳ ಹೊಳೆಯುತ್ತಿದ್ದವು. ದಿವ್ಯನಗರಿಯ ಸೌಂದರ್ಯವನ್ನು ಮನವಣಿ ನೋಡುತ್ತ ನಡೆದ ರತ್ನವರ್ತಕನು ಒಂದು ಭವ್ಯಮಂದಿರದ ಮುಂದೆ ಬಂದು ನಿಂತನು. ಅಲ್ಲಿ ಯಾರೂ ಕಾವಲಿಗಿರಲಿಲ್ಲ; ಯಾವ ದ್ವಾರಪಾಲಕನೂ ಇರಲಿಲ್ಲ. ದಿವ್ಯನಗರಿಯಲ್ಲಿ ಮುಕ್ತ ದರ್ಬಾರ—ಅಲ್ಲಿ ಯಾರಿಗೆ ಪ್ರತಿಬಂಧ? ರತ್ನಶೆಟ್ಟಿ ತೆರೆದ ಬಾಗಿಲೊಳಗಿಂದ ಇಣಿಕಿ ನೋಡಿದನು. ಅಲ್ಲಿಯೆ ಮಂತ್ರಮುಗ್ಧನಾಗಿ ನಿಂತುಬಿಟ್ಟನು.

ಭಗವಾನ್ ಶಂಕರನು ರತ್ನಖಚಿತ ಸಿಂಹಾಸನದಲ್ಲಿ ಆಸೀನನಾಗಿದ್ದನು. "ಇಂದಿನ ಭೋಜನ ಅವೆಷ್ಟು ಸಮೀಚೀನವಾಗಿದ್ದಿತು" ಎನ್ನುತ್ತ ಸುತ್ತಲೂ ದೃಷ್ಟಿ ಬೀರುತ್ತಿದ್ದನು. ಶ್ರೀಗೌರಿಯು ಭಗವಂತನ ಪದತಲದಲ್ಲಿ ಕುಳಿತು ಸದ್ಗದಿತಾಂತಃಕರಣದಿಂದ ಆತನ ಚರಣಗಳನ್ನು ಹಿಡಿದಿದ್ದಳು. ದೇವಿಯ ಅಷ್ಟ ಸಾತ್ವಿಕ ಭಾವಗಳು ತುಂಬಿ ಬಂದು ಕೋಡಿಯೊಡೆದಿದ್ದವು. ಅಧರಗಳು ನಡುಗುತ್ತಿದ್ದವು. ಕೆನ್ನೆಯ ಮಧ್ಯಭಾಗಗಳು ಕಂಪಿಸುತ್ತಿದ್ದವು. ಕಂಠವು ಬಿಗಿದುಬಂದಿತ್ತು. ಉನ್ಮೀಲಿತ ನೇತ್ರಗಳೊಳಗಿಂದ ಪ್ರೇಮಾಶ್ರುಧಾರೆಗಳು ಹರಿಯುತ್ತಿದ್ದವು. ತನ್ನ ಪ್ರೇಮಾಶ್ರುಗಳಿಂದ ಶ್ರೀಗೌರಿಯು ಭಗವಂತನ ಚರಣಗಳಿಗೆ ಅಭಿಷೇಕಗೈಯುತ್ತಿದ್ದಳು.

ಭಗವಂತನು ಪ್ರತಿನಿತ್ಯ ಪ್ರಭಾತಕಾಲದಲ್ಲಿ ಹೊರಬಿದ್ದು ತಪಮಾಡಿ ಹಿಂದಿರುಗುತ್ತಿದ್ದನು. ಈಚೆಗಂತೂ ಭಗವಂತನು ಹಿಂದಿರುಗುವ ಹೊತ್ತಿಗೆ ಸಂಜೆಗತ್ತಲು ಕವಿಯುತ್ತಿತ್ತು. ಭಗವಂತನ ದಾರಿ ನೋಡಿ ನೋಡಿ ಗೌರೀದೇವಿ ಬೇಸತ್ತು

ಹೋಗುತ್ತಿದ್ದಳು. ಹೀಗೆಯೇ ಕೆಲದಿನಗಳು ಕಳೆದಮೇಲೆ ಗೌರಿಯೆಂದಳು— "ಭಗವನ್, ನೀವು ನಸುಕಿನಲ್ಲಿ ಹೊರ ಬಿದ್ದು ಸಂಜೆಯಲ್ಲಿ ಮರಳುವಿರಿ. ಅಡಿಗೆಯೆಲ್ಲಾ ಆರಿಹೋಗು ವುದು. ನಡುಹಗಲಿನಲ್ಲಿ ಊಟಕ್ಕೆ ಬಂದು ಮತ್ತೆ ಹೋಗ ಬಹುದಲ್ಲ!" ದೇವಿಯ ಮಾತು ಕೇಳಿ ಭಗವಂತನೆಂದನು— "ನೀನು ಹೇಳುವುದು ಅನುಕೂಲವೇ ಇದೆ— ಆದರೆ ನನಗೆ ಹಾಗೆ ಮಾಡಲಾಗುವುದಿಲ್ಲ. ಯಾಕೆಂದರೆ—" ಭಗವಂತನ ಮಾತು ಮುಗಿಯುವಷ್ಟರಲ್ಲಿಯೇ ಕುತೂಹಲದಿಂದ ದೇವಿ ಯೆಂದಳು— "ಪ್ರಭಾತದಿಂದ ಸಂಧ್ಯಾಸಮಯದವರೆಗೆ ಭೋಜನ ಮಾಡದೆ ಗಾಳಿಬಿಸಿಲೆನ್ನದೆ ನಿಂತು ನಿಂತು ಮಾಡು ವಂತಹಮಹತ್ವದ ಕೆಲಸವಾದರೂ ಯಾವುದು?" ಭಗವಂತನು ಗಂಭೀರ ಮುದ್ರೆಯಿಂದೆಂದನು— "ನನಗೆ ವಿಶ್ವದ ಮೇಲ್ವಿ ಚಾರಣೆ ಮಾಡುವುದಿರುತ್ತದೆ, ಕ್ಷುಧಿತರ ತೃಷಿತರ ಹಸಿವು ನೀರಡಿಕೆ ಹಿಂಗಿಸುವ ಕೆಲಸವಿರುತ್ತದೆ. ಅದು ಮುಗಿದ ಮೇಲೆಯೆ ಮರಳಲು ಅನುಕೂಲವಾಗುತ್ತದೆ."

ಭಗವಂತನ ಮಾತು ಕೇಳಿ ಗೌರಿಯು ಆಶ್ಚರ್ಯಚಕಿತಳಾ ದಳು. ಇಂತಹ ಅಪರಂಪಾರ ವಿಶ್ವದ ಮೇಲ್ವಿಚಾರಣೆಯನ್ನು ಭಗವಂತನು ಎಂತು ಮಾಡುತ್ತಿರಬಹುದು ಎಂದೆನಿಸಿತು. ಒಂದು ಸಣ್ಣ ಶಂಕೆಯು ಅವಳ ಮನಸ್ಸಿನಲ್ಲಿ ಉದ್ಭವಿಸಿತು. ಗೌರಿಯೆಂದಳು -- "ಭಗವನ್, ವಿಶ್ವದ ಆಗುಹೋಗುಗಳ ನಿರೀಕ್ಷಣೆ ನಡೆಸಿರುವಾಗ ಸಕಲ ಕ್ಷುಧಿತ–ತೃಷಿತರ ಹಸಿವು-ನೀರಡಿಕೆ ಹಿಂಗಿಸುವುದನ್ನು ನೀವು ನೋಡಿಕೊಳ್ಳುವಿರಾ?" ಭಗವಂತನೆಂದನು— "ಹೌದು. ಸಕಲ ವಿಶ್ವದ ಮೇಲ್ವಿಚಾರಣೆ ಯನ್ನು ಮಾಡುವೆ ನಿಷ್ಪಾಪರ ಹಸಿವು-ನೀರಡಿಕೆ ಹಿಂಗಿಸುವೆ,

ಹಾಗೂ ತಮ್ಮದೆಂಬುದನ್ನು ಮರೆತುಬಿಟ್ಟಿರುವವರ ಯೋಗ ಕ್ಷೇಮವನ್ನು ವಿಚಾರಿಸಿ ನಾನು ಮರುಳುವೆ.'' ಗೌರಿಯು ಮತ್ತೆ ಕೇಳಿದಳು— ''ದೇವ! ನಿಷ್ಪಾಪರ ಕ್ಷುಧೆ ಹಿಂಗಿಸದೆ ನೀವು ಏನೂ ಸೇವಿಸುವುದಿಲ್ಲವೇ?'' ನಗುನಗುತ್ತ ಭಗವಂತ ನೆಂದನು— '' ನಿರ್ಮಲರಿಗೆ ನೀಡಿಯೇ ನಾನು ಉಣ್ಣುವೆ. ನಿಯಮ ಮಾಡುವವನು ನಿಯಮಭಂಗ ಮಾಡಬಹುದೇ?'' ಭಗವಂತನು ಹೀಗೆಂದರೂ ಗೌರಿಯ ಮನಸ್ಸಿನಲ್ಲಿ ಶಂಕೆ ಹೆಡೆ ಯಿಕ್ಕುತ್ತಲೇ ಇತ್ತು. ಇಷ್ಟು ದೊಡ್ಡ ವಿಶ್ವದಲ್ಲಿ ಎಷ್ಟೋ ಜನ ಕ್ಷುಧಿತರು ಭಗವಂತನ ದೃಷ್ಟಿಪಥದಿಂದ ಜಾರುತ್ತಿರ ಬಹುದು— ಎಂದು ಅವಳಿಗೆನಿಸಿತು. ಶಂಕೆಯ ನಿರಸನವಾಗ ಲೆಂದು ಭಗವಂತನ ಪರೀಕ್ಷೆ ಮಾಡುವುದಾಗಿ ಗೌರಿಯು ನಿರ್ಧರಿಸಿದಳು.

ನಿತ್ಯದಂತೆ ಭಗವಂತನು ಪ್ರಭಾತದಲ್ಲಿ ವಿಶ್ವದ ಮೇಲ್ವಿ ಚಾರಣೆಗಾಗಿ ಹೊರಗೆ ಹೊರಟನು. ಗೌರಿಯು ಅಂಗಳದಲ್ಲಿ ಎಸೆದ ಕಾಳು ಚುಂಚಿನಿಂದ ಎತ್ತಿಕೊಳ್ಳಲು ಬಂದ ಪುಟ್ಟ ಹಕ್ಕಿ ಗಳನ್ನು ಹಿಡಿದು, ಹಿಮ್ಮಗ್ಗಲಿನ ಕೋಣೆಯಲ್ಲಿ ಹಾಕಿ, ಬೀಗ ಬೀಗಿದು, ಕೈ ತನ್ನ ಹತ್ತಿರ ಇರಿಸಿಕೊಂಡಳು. ಭಗವಂತನು ಇಂದು ಬಹಳ ಬೇಗನೆ ಮರಳಿದನು. ಇನ್ನೂ ಅಡಿಗೆಯೂ ಮುಗಿದಿರಲಿಲ್ಲ. ಭಗವಂತನು ಅಡಿಗೆಮನೆಯಲ್ಲಿ ಹಣಕಿ ಹಾಕಿ ನುಡಿದನು— ''ತುಂಬಾ ಹಸಿವೆಯಾಗಿದೆ. ಬೇಗನೆ ಉಣಬಡಿಸಿರಿ.'' ಗೌರಿಯ ಮನಸ್ಸಿನಲ್ಲಿ ಗೊಂದಲವೆದ್ದಿತು. ಭಗವಂತನು ಬೇಗ ಬಂದುದಕ್ಕೆ ಆದ ಆನಂದವೊತ್ತಟ್ಟಿಗೆ. ಅಡಿಗೆ ಬೇಗನೆ ಆಗದ್ದಕ್ಕೆ ವಿಮಂಚನೆ ಇನ್ನೊಂದು ಕಡೆಗೆ, ಅಲ್ಲದೆ ಊಟವಾದ ಕೂಡಲೆ ಭಗವಂತನ ಪರೀಕ್ಷೆಯಾಗಬೇಕು!

ಅಡಿಗೆಯಾಯಿತು. ಭಗವಂತನು ಭೋಜನಕ್ಕೆ ಕುಳಿತನು. ಭೋಜನ ಮುಗಿದೊಡನೆ ಕೈತೊಳೆದೆದ್ದು, ರೇಶ್ಮೆ ವಸ್ತ್ರದಿಂದ ಕೈಯೊರಸಿ, ಹೊರಗಡೆಯ ಸಿಂಹಾಸನದಲ್ಲಿ ಸುಖಾಸೀನ ನಾದನು. ಭಗವಂತನ ಊಟ ಮುಗಿದೊಡನೆ ದೇವಿ ಗೌರಿ ಲಗುಬಗೆಯಿಂದ ಹಕ್ಕಿಗಳನ್ನು ಬಂಧಿಸಿಟ್ಟ ಕೋಣೆಯ ಕಡೆಗೆ ಹೋದಳು. ಬೀಗ ತೆಗೆದು ಬಾಗಿಲು ತೆರೆದರೆ— ಅದೇನು ! ಕೋಣೆಯ ನೆಲದ ತುಂಬ ಧಾನ್ಯವನ್ನು ಎರಚಿದ್ದು, ಸಮೀಪ ದಲ್ಲಿಯೇ ಮಣ್ಣಿನ ಬಾನಿಯಲ್ಲಿ ನೀರು ತುಂಬಿ ಇಟ್ಟಿದೆ! ಹೊಟ್ಟೆತುಂಬ ಕಾಳು ತಿಂದು, ನೀರು ಕುಡಿದು ಹಕ್ಕಿಗಳು ಸುಖದಿಂದ ನಿದ್ದೆ ಮಾಡುತ್ತಿವೆ! ಆ ದೃಶ್ಯ ನೋಡಿ ದೇವಿಯ ಹೃದಯವು ತುಂಬಿ ಬಂದಿತು. ಭಗವಂತನ ವಿಶ್ವದ ವಿಚಾರಣೆ ಅದೆಷ್ಟು ಪರಿಪೂರ್ಣವಾಗಿದೆಯೆಂಬುದು ಮನದಟ್ಟಾಯಿತು. ಭಗವಂತನ ದಯೆ, ಕಾರುಣ್ಯ, ವಾತ್ಸಲ್ಯ ನೋಡಿ ಅವಳ ಕುತ್ತಿಗೆಶಿರ ಬಿಗಿದು ಬಂದವು. ಅವಳು ಹಲವು ಸಲ ಮನಸ್ಸಿ ನಲ್ಲಿಯೇ ಭಗವಂತನ ಕ್ಷಮೆ ಕೋರಿದಳು. ಆದರೆ ಅದರಿಂದ ಸಮಾಧಾನವೆನಿಸಲಿಲ್ಲ. ಅವಳು ಓಡಿ ಬಂದು ಭಗವಂತನ ಚರಣ ಹಿಡಿದಳು. ಆ ವಿಮಲ ಚರಣಗಳ ಮೇಲೆ ಗೌರಿಯ ಪ್ರೇಮಾಶ್ರುಗಳ ಅಭಿಷೇಕವಾಗತೊಡಗಿತು. ಆಗ ಭಗವಂತನು ತನಗೇನೂ ತಿಳಿಯದಂತೆ ನಟಿಸುತ್ತ, “ಇಂದಿನ ಭೋಜನ ಅದೆಷ್ಟು ಸಮೀಚೀನವಾಗಿದ್ದಿತು” ಎಂದು ಉದ್ಗಾರ ತೆಗೆದನು.

ಬಾಗಿಲೊಳಗಿಂದ ಇಣಿಕಿನೋಡುತ್ತಿದ್ದ ರತ್ನಶೆಟ್ಟಿಯ ಕಡೆಗೆ ಭಗವಂತನು ದೃಷ್ಟಿಬೀರಿ ಆತನನ್ನು ಒಳಗೆ ಕರೆದನು. ರತ್ನಶೆಟ್ಟಿಯು ತನ್ನ ರತ್ನಗಳನ್ನು ಭಗವಂತನೆದುರಿಗೆ ತೆಗೆದಿರಿ ಸಿದನು. ಭಗವಂತನು ಆನಂದದಿಂದ “ಈ ನಿನ್ನ ರತ್ನಗಳ

ಬೆಲೆಯೇನು?'' ಎಂದು ಬೆಸಗೊಂಡನು. ರತ್ನಶೆಟ್ಟಿಯೆಂದನು— "ಈ ರತ್ನಗಳು ಅಮೌಲ್ಯವಾಗಿವೆ. ಆದರೆ ಈ ನಗರಿಯಲ್ಲಿ ಎಲ್ಲರ ಕಂಠಗಳಲ್ಲಿ ಇಂಥ ರತ್ನಗಳು ಥಳಥಳಿಸುತ್ತಿವೆ. ಅಸ್ಸಲ ರತ್ನಗಳ ಬೆಳೆಯೇ ಇಲ್ಲಿ ಬೆಳೆಯುತ್ತಿದೆ. ಎಂದಮೇಲೆ ನನ್ನ ರತ್ನಗಳು ಅಮೌಲ್ಯವೆಂದು ಹೇಗೆನ್ನಲಿ?'' ಆಗ ಭಗವಂತನು ಒಂದು ಕಡೆ ಬೊಟ್ಟು ಮಾಡಿ ತೋರಿಸುತ್ತ ಎಂದನು— "ಸರಿ! ಅಲ್ಲಿ ವಿಪುಲ ಧನವಿದೆ. ನಿನಗೆ ಬೇಕೆನಿಸುವಷ್ಟು ತೆಗೆದುಕೊಂಡು ಹೋಗು. ನಿನಗೆ ಎತ್ತಲು ಬರುವಷ್ಟು ಎತ್ತಿಕೊಂಡು ಹೋಗು.'' ವತ್ಸವು ಮಾತೆಯನ್ನು ನೋಡುವಂತೆ ಭಗವಂತನನ್ನು ನೋಡುತ್ತ ರತ್ನಶೆಟ್ಟಿಯೆಂದನು— "ನಾನು ಅಮೌಲ್ಯವೆಂದು ಎಣಿಸಿ ತಂದ ರತ್ನಗಳು ಇಲ್ಲಿ ಅಗಣಿತವಾಗಿರುವಾಗ ನಾನು ನನ್ನ ರತ್ನಗಳನ್ನು ಇಲ್ಲಿ ಎಂತು ಇಡಲಿ? ಹಾಗೂ ನನ್ನ ರತ್ನಗಳನ್ನು ಕೊಡದೆ ಇಲ್ಲಿಯ ಧನಸಂಪತ್ತನ್ನು ನಾನೆಂತು ತೆಗೆದುಕೊಳ್ಳಲಿ? ಕೊಡು-ಕೊಳ್ಳುವಿಕೆ ಮಾಡುವ ವರ್ತಕನು ನಾನು. ಪುಕ್ಕಟೆಯಾಗಿ ಧನದೌಲತ್ತು ತೆಗೆದುಕೊಂಡು ನಾನು ನನ್ನ ವರ್ತಕವೃತ್ತಿಗೆ ಕಲಂಕ ತಂದುಕೊಳ್ಳಲಿಯಾ?''

ಭಗವಂತನು ಕೌತುಕಪೂರ್ಣ ದೃಷ್ಟಿಯಿಂದ ಆತನನ್ನು ನೋಡುತ್ತಿದ್ದನು. ಪ್ರಭುವಿನ ಪಾದತಲದಲ್ಲಿ ಕುಳಿತು ರತ್ನಶೆಟ್ಟಿಯೆಂದನು— "ಭಗವನ್, ಭಿಕ್ಷುಕನಾಗಿ ನಾನು ನಿಮ್ಮೆಡೆಗೆ ಬಂದಿದ್ದರೆ ತಾವು ಕೊಡಮಾಡಿದ ಧನವನ್ನು ನಾನು ಭಿಕ್ಷೆಯೆಂದು ಸ್ವೀಕರಿಸುತ್ತಿದ್ದೆ. ಆದರೆ ನಾನು ವರ್ತಕನು. ನಾನು ಭಿಕ್ಷೆಯನ್ನು ಹೇಗೆ ಸ್ವೀಕರಿಸಲಿ? ತಾನು ಮೋಸಹೋಗದೆ, ಇನ್ನೊಬ್ಬರನ್ನೂ ಮೋಸಗೊಳಿಸದಿರುವುದು—ಇದು

ವರ್ತಕರ ವೃತ್ತಿ! ಮೌಲ್ಯ ಕೊಡದೆ ತಕ್ಕೊಳ್ಳಕೂಡದು, ಮೌಲ್ಯ ತಕ್ಕೊಳ್ಳದೆ ಕೊಡಕೂಡದು—ಇದು ನಮ್ಮ ಶಾಸ್ತ್ರ. ರತ್ನಗಳ ವ್ಯಾಪಾರ ಮಾಡುವ ನಾವು ವಜ್ರಕ್ಕಿಂತಲೂ ಚೊಕ್ಕ ಹಾಗೂ ನಿಷ್ಕಲಂಕರಾಗಿರುವುದು ನಮ್ಮ ನೀತಿಯಾಗಿದೆ! ದೇವ! ನಿಮ್ಮ ಧನ ನಿಮ್ಮಲ್ಲಿಯೇ ಉಳಿಯಲಿ, ನಾನು ಬಂದ ದಾರಿಯಿಂದ ಹಿಂದಿರುಗುವೆ.” ಹೀಗೆನ್ನುತ್ತ ರತ್ನಶೆಟ್ಟಿಯೆದ್ದನು. ಆತನಿಗೆ ಕೂಡಲು ಹೇಳಿ ಭಗವಂತನೆಂದನು— “ಅಯ್ಯಾ! ನಮ್ಮ ಧರ್ಮ ನಾವು ಪಾಲಿಸಬೇಕಷ್ಟೇ! ಅತಿಥಿ ಸತ್ಕಾರವನ್ನು ನಾವು ಮಾಡಬೇಕಾಗಿದೆ!”

ರತ್ನಶೆಟ್ಟಿಯು ಎಲೆ ಬಡಿಸಲಾಯಿತು. ರತ್ನಶೆಟ್ಟಿ ಊಟಕ್ಕೆ ಕುಳಿತನು. ಸಕ್ಕರೆಯ ರಾಶಿಯಲ್ಲಿ ಹೊಕ್ಕ ಇರುವೆಗೆ ಎಲ್ಲ ಕಡೆಗೆ ಸಕ್ಕರೆಯೇ ಸಕ್ಕರೆ ಕಾಣುವಂತೆ ಹಾಗೂ ಸಿಕ್ಕುವಂತೆ ರತ್ನಶೆಟ್ಟಿಗೂ ಆಯಿತು. ಭಗವಂತನ ಮನೆಯಲ್ಲಿಯ ನಿರ್ವ್ಯಾಜ ಪ್ರೇಮ–ವಾತ್ಸಲ್ಯಗಳನ್ನು ಪ್ರತ್ಯಕ್ಷವಾಗಿ ನೋಡುತ್ತ, ಮನಸ್ಸಿನಿಂದ ಅನುಭವಿಸುತ್ತ, ಮಿಷ್ಟಾನ್ನದೊಡನೆ ಸೇವಿಸುತ್ತಲಿದ್ದನು ರತ್ನವರ್ತಕನು. ಸಕ್ಕರೆಯ ಸಿಹಿ ನಾಲಿಗೆಯನ್ನು ಕ್ಷಣ ಮಾತ್ರ ಸಿಹಿಗೊಳಿಸುವುದು— ಭಗವಂತನ ಮನೆಯ ರಸದೂಟವು ವರ್ತಕನ ನಾಲಿಗೆಯನ್ನು ಕೊನೆತನಕ ಸಿಹಿಗೊಳಿಸಿತು. ವರ್ತಕನು ಮಧುರಮಧುರವಾಗಿ ಭಾಷಿಸತೊಡಗಿದನು.

ರತ್ನಶೆಟ್ಟಿಯು ಭಗವಂತನನ್ನು ವಂದಿಸಿ, ಹೋಗಲು ಅಪ್ಪಣೆ ಕೇಳಿದನು. ಭಗವಂತನು ಸ್ನೇಹಮಯ ದೃಷ್ಟಿಯಿಂದ ಆತನನ್ನು ಈಕ್ಷಿಸುತ್ತ ನುಡಿದನು— “ಗುಣಶಾಲಿ ವರ್ತಕ ಶ್ರೇಷ್ಠ, ನೀನು ಮಾನವ! ಮಾನವನು ತುಂಬಾ ದುರ್ಲಭ,

ದುರ್ಮಿಳ ವಸ್ತುವಾಗಿದ್ದಾನೆ. ನಮಗಂತೂ ಆತನ ಆವಶ್ಯಕತೆ ಅಷ್ಟಿಷ್ಟಲ್ಲ! ಮಾನವನಿಗಲ್ಲದೆ ನಮ್ಮ ಅಸ್ತಿತ್ವವು ಯಾರಿಗೆ ತಿಳಿಯುವುದು ಸಾಧ್ಯ? ನಮ್ಮ ಮಹತಿಯನ್ನು ಮಾನವನಲ್ಲದೆ ಯಾರು ಹಾಡುವರು? ನಮ್ಮ ಪ್ರತಿಷ್ಠೆಯನ್ನು ಮಾನವನಲ್ಲದೆ ಯಾರು ರಕ್ಷಿಸುವರು? ಈಶ್ವರೀಗುಣಗಳ ಇಚ್ಛೆಯು ಮಾನವನ ಹೊರತು ಇನ್ನಾರಿಗಿರುವುದು? ನಮಗೆ ಜಡವೆನಿಸುವ ಐಶ್ವರ್ಯದ ಭಾರವನ್ನು ಮಾನವನಲ್ಲದೆ ಯಾರು ಹಗುರಗೊಳಿಸಬಲ್ಲರು?" ಭಗವಂತನು ಮುಂದರಿದೆಂದನು— "ಇಷ್ಟೇ ಏಕೆ? ಮಾನವನ ಮಧ್ಯಸ್ಥಿಕೆಯಿಂದಲೇ ದುಃಖಿತರ ದುಃಖವನ್ನು ನಾವು ನಿವಾರಿಸುವೆವು. ಅಜ್ಞಾನಿಗಳನ್ನು ಜ್ಞಾನಿಗಳನ್ನಾಗಿ ಮಾಡುವೆವು. ದುರ್ಬಲರನ್ನು ಸಬಲರನ್ನಾಗಿ ಮಾಡುವೆವು. ಮಾನವನು ನಮ್ಮ ಓಲಗದ ಫಡಫಡ ಹಾರುವ ಪತಾಕೆಯಾಗಿದ್ದಾನೆ. ಎಲವೊ! ಮಾನವನು ಅಸ್ಸಲ-ಅಸ್ಸಲ ಜಾತಿಯ ರತ್ನನಾಗಿದ್ದಾನೆ. ಹೇಳು! ಈ ಅಮೌಲ್ಯ ರತ್ನದ ವ್ಯಾಪಾರ ಹೊಂದಿಸಲು ಸಿದ್ಧನಿರುವೆಯಾ? ಬೇಕಾದಷ್ಟು ಬೆಲೆ ಕೊಡಲು ಸಿದ್ಧರಿರುವೆವು! ಮಾನವ ರತ್ನವು ನಮಗೆ ಪ್ರಾಣಕ್ಕಿಂತಲೂ ಪ್ರಿಯವಾಗಿರುವುದು!"

ಪಾಡುಮಾವು ಕೇಶರದಂತೆ ಬಣ್ಣವೇರುವುದು, ಮೃದುವಾಗುವುದು, ಮಧುರವಾಗತೊಡಗುವುದು. ಹಾಗೆಯೇ ವರ್ತಕನ ಅಂತರಂಗವೂ ಆಗತೊಡಗಿತು. ಸೋಲಹತ್ತಿದ ಮನುಷ್ಯನು ತನ್ನನ್ನು ತಾನೇ ಸಾವರಿಸಿಕೊಳ್ಳುವಂತೆ ವರ್ತಕನು ತನ್ನನ್ನು ತಾನೇ ಸಾವರಿಸಿಕೊಳ್ಳುತ್ತ ನುಡಿದನು— "ಭಗವನ್, ನಿಮ್ಮ ಮನೆಯ ಪಕ್ವಾನ್ನಗಳು ಮೊದಲೇ ನನ್ನನ್ನು ಸಿಹಿಗೊಳಿಸಿಬಿಟ್ಟಿವೆ, ಅದರಮೇಲೆ ಸಕ್ಕರೆ ಉದುರಿಸಿ

ನನ್ನನ್ನು ಅದರಲ್ಲಿ ಮುಳುಗಿಸಿ ಬಿಡಬೇಕೆನ್ನುವಿರಾ ? ” ರತ್ನ ಶೆಟ್ಟಿಯು ತುಸು ಧೈರ್ಯದಿಂದ ಮುಂದೆಂದನು—“ಭಗವನ್! ಮಾನವರತ್ನಕ್ಕೆ ನೀವು ಏನು ಬೆಲೆ ಕೊಡುವಿರಿ ? ” ಪ್ರಭು ತತ್‌ಕ್ಷಣ ಉತ್ತರಿಸಿದನು— “ ಅಮೌಲ್ಯಕ್ಕೆ ಅಮೌಲ್ಯವೇ ! ಇದನ್ನು ಹೇಳಬೇಕೇ ? ಕೊಡುವಂತೆಯೇ ಕೊಳ್ಳುವುದು ವಿಶ್ವದ ನಿಯಮವಾಗಿದೆ! ”

ಮಾನವನ ಮೇಲಿನ ಪ್ರಭುವಿನ ಪ್ರೇಮ ನೋಡಿ ರತ್ನ ಶೆಟ್ಟಿಗೆ ಅನಿಸಿತು— ಪ್ರಭುಚರಣದಲ್ಲಿ ಪುಷ್ಪವನ್ನು ಅರ್ಪಿಸುವಂತೆ ತನ್ನನ್ನು ಪ್ರಭುಚರಣದಲ್ಲಿ ಅರ್ಪಿಸಿಕೊಳ್ಳಬೇಕು ! ಹೀಗೆ ವಿಚಾರ ಬರುವಷ್ಟರಲ್ಲಿ ರತ್ನಶೆಟ್ಟಿ ಭಗವಂತನ ಚರಣಗಳನ್ನು ಗಟ್ಟಿಯಾಗಿ ಹಿಡಿದು “ ಸರ್ವಾರ್ಪಣ ” ಎಂದು ಉದ್ಗರಿಸಿದನು. ವಾಣಿಯು ತುಟಿಯ ತಟವೊಡೆದು ಹೊರಗೇನೋ ಹೋಯಿತಾದರೂ ಸರ್ವಾರ್ಪಣ ಮಾಡಿದ ಸಮಾಧಾನವು ರತ್ನಶೆಟ್ಟಿಗೆ ಅನಿಸಲಿಲ್ಲ. ತುಸು ಕೊಟ್ಟು ಬಹಳ ಉಳಿಸಿಕೊಂಡದ್ದಾಗಿ ಆತನಿಗೆ ಅನಿಸಹತ್ತಿತು. ಚೊಕ್ಕ ವ್ಯವಹಾರ ಮಾಡುವ ರತ್ನಶೆಟ್ಟಿಯು ಅಂಶಮಾತ್ರವೂ ಹಿಂದಕ್ಕಿರಿಸದೆ ಪ್ರಭುಚರಣದಲ್ಲಿ ಸರ್ವಾರ್ಪಣ ಮಾಡಬೇಕೆಂದಿದ್ದನು. ಕೆರೆಯ ತಳದಿಂದ ಗುಳ್ಳೆಗಳು ಮೇಲಕ್ಕೇಳುವಂತೆ ಅವನ ಚಿತ್ತದ ತಳದಿಂದ ಒಂದೊಂದು ವಿಚಾರವು ಮೇಲಕ್ಕೆ ಬರತೊಡಗಿತು. “ ಈ ತನುವನ್ನು ಭಗವಂತನಿಗೆ ಅರ್ಪಿಸಿದರೆ ಈ ತನು ತನ್ನದೆನ್ನುವ ಮನ ಹಿಂದಕ್ಕುಳಿಯುತ್ತದೆ. ತನು-ಮನ-ಬುದ್ಧಿಗಳನ್ನು ಅರ್ಪಿಸಿದರೆ ಅವುಗಳಿಗೆ ಆಶ್ರಯ ಕೊಡುವ ಅಹಂಕಾರವು ಸಿಲ್ಕು ಉಳಿಯುತ್ತದೆ. ಅಹಂಕಾರವನ್ನು ಅರ್ಪಿಸಿದರೂ, ಇವನ್ನೆಲ್ಲ ಅರ್ಪಿಸುವ ‘ ನಾನು ’ ಶಿಲ್ಕು

ಉಳಿಯುತ್ತೇನೆ. ಅರ್ಪಿಸಲ್ಪಡುವ ವಸ್ತುವನ್ನು ಅರ್ಪಿಸುವ 'ನಾನು'— ಈ 'ನನ್ನೊ'ಂದಿಗೆ ಅರ್ಪಣ ಮಾಡುವದೆಂತು ? ಇಷ್ಟು 'ನಾನು' ಎಂಬುದರ ಆಚೆ ಹೇಗೆ ಹೋಗುವುದು ? ಈ ಸೀಮೆಯನ್ನು ಹೇಗೆ ದಾಟುವುದು? " ರತ್ನಶೆಟ್ಟಿ ಯೋಚನಾ ಪರವಶನಾದನು. 'ನಾನು' ಸಿಲ್ಕು ಉಳಿಸದೆ ತನ್ನನ್ನು ಪ್ರಭು ವಿಗೆ ಹೇಗೆ ಅರ್ಪಿಸುವುದೆಂಬುದು ಆತನಿಗೆ ತಿಳಿಯಲೊಲ್ಲದು. ಚಿತ್ರದಂತೆ ಆತನು ಕರುಣಾಸಾಗರ ಭಗವಂತನ ಕಡೆಗೆ ಅಚಲ ದೃಷ್ಟಿಯಿಂದ ನೋಡುತ್ತ ನಿಂತನು. ಆತನ ತನು ಪುತ್ಥಳಿ ಯಂತೆ ಸ್ಥಿರವಾಗಿತ್ತು, ಅಂತರಂಗವು ಆದರ-ಭಕ್ತಿ-ಪ್ರೇಮ ಗಳಿಂದ ತುಂಬಿಬಂದಿತ್ತು. ರತ್ನಶೆಟ್ಟಿಯ ಅಂತರ್ಯದಲ್ಲಿ ಶುದ್ಧಭಾವನೆಗಳ ದಟ್ಟಣೆಯಾಗಿತ್ತು. ಭಕ್ತಿ ಪ್ರೇಮಗಳು ಅಲ್ಲಿ ಹಿಡಿಸಲಾರದಾದವು ; ಅಂತಃಕರಣಕ್ಕೆ ಕೋಡಿಯೊಡೆ ಯಿತು— ಸರ್ವಭಾವಗಳು ಕೊಚ್ಚಿಕೊಂಡು ಭಗವಂತನತ್ತ ಪ್ರವಹಿಸಿದವು.

ತನ್ನೆರಡೂ ಪುಟ್ಟ ಕೈ ಚಾಚಿ ತಾತನ ಕಡೆ ಓಡುವ ಕಂದ ನನ್ನು ತಾತನು ಚಟ್ಟನೆತ್ತಿಕೊಳ್ಳುವಂತೆ ಭಗವಂತನೂ ಮಾಡಿ ದನು. ರತ್ನಶೆಟ್ಟಿಯ ಹೃದಯದಿಂದ ಚಿಮ್ಮಿ ಬರುತ್ತಿರುವ ಭಕ್ತಿ-ಪ್ರೇಮಗಳನ್ನು ಚಟ್ಟನೆತ್ತಿ ಬಿಗಿದಪ್ಪಿಕೊಂಡನು. ಭಗ ವಂತನು ಸುಪ್ರಸನ್ನನಾಗಿ ತಲೆದೂಗತೊಡಗಿದನು. ತನ್ನ ತೇಜಃಪುಂಜ ದೃಷ್ಟಿಯನ್ನು ರತ್ನಶೆಟ್ಟಿಯತ್ತ ಬೀರಿದನು. ಭಗವಂತನ ಸುತ್ತು ಅತ್ಯಂತ ಕಾಂತಿಮಯವಾದ ಭವ್ಯವಾದ ಸುವರ್ಣವಲಯವು ತಿರುಗಹತ್ತಿತು. ಆ ತೇಜೋವಲಯ ದಿಂದ ದೈದೀಪ್ಯಮಾನವಾದ ಧವಲಕಿರಣಗಳು ಉದಯಿಸಿ ವಿಶ್ವದಲ್ಲಿ ಪಸರಿಸತೊಡಗಿದವು. ಭಗವಂತನ ಅಂಗದೊಳ

ಗಿಂದ ಹೀರಕದ ಕಣಗಳಂತೆ ತೇಜದ ಸ್ಫುಲಿಂಗಗಳು ಎಲ್ಲ ಕಡೆಗೂ ತೂರತೊಡಗಿದವು. ಭಗವಂತನ ನೇತ್ರಗಳೊಳಗಿಂದ ದಿವ್ಯತೇಜದ ಜ್ಯೋತಿಯೊಗೆದು ಮಾನವನ ಹೃದಯವನ್ನು ಹೊಕ್ಕಿತು.

ಕೃಷ್ಣರಾತ್ರಿಯ ಮೇಲೆ ಪೌರ್ಣಿಮೆಯ ಪ್ರಭೆ ಬಿದ್ದರೆ ರಾತ್ರಿಯು ಪ್ರಕಾಶಮಾನವಾಗುವುದು. ಮಾನವ ಹೃದಯದ ಮೇಲೆ ಜ್ಯೋತಿಪ್ರಕಾಶ ಬಿದ್ದರೆ ಆ ತೇಜೋಮಯತೆಯನ್ನು ಯಾರು ಬಣ್ಣಿಸಬಲ್ಲರು ?

ಸೂರ್ಯೋದಯವಾದೊಡನೆ ಮನೆಯ ಒಳಗೂ ಹೊರಗೂ ಬೆಳಕೇ ಬೆಳಕಾಗುವುದು. ಆ ಬೆಳಕಿನಲ್ಲಿ ಮನೆಯ ಒಳಗಿನ-ಹೊರಗಿನದೆಲ್ಲವೂ ಕಾಣಿಸಹತ್ತುವುದು. ಜ್ಯೋತಿ ಪ್ರಕಾಶದಲ್ಲಿ ರತ್ನಶೆಟ್ಟಿಗೆ ಎಲ್ಲ ಕಾಣಿಸತೊಡಗಿತು. ಅಂತರ್ಯಾಮಿಯ ತೇಜೋಮಯತೆಯನ್ನು ನೋಡಿ ಆತನು ವಿಸ್ಮಿತನಾದನು. ಆತನೀ ಮುಗ್ಧಸ್ಥಿತಿಯಲ್ಲಿ ಆತನ 'ನಾನು' ಮಾತ್ರ ಆತನಿಗೆ ಪತ್ತೆಯಾಗಲಿಲ್ಲ. ಆ 'ನಾನು' ಯಾವಾಗಲೋ ಜಾರಿ ಹೋಗಿದ್ದನು. ಆ 'ನಾನು' ಸೀಮೆಯಾಚೆಗೆ ಹೋಗಿದ್ದನು, ಹಾಗೂ ಅಮರ್ಯಾದದೊಡನೆ ಅಮರ್ಯಾದನಾಗಿದ್ದನು. ರತ್ನಶೆಟ್ಟಿಯು ತನ್ನಷ್ಟಕ್ಕೆ ಅಂದುಕೊಂಡನು— " ಧನ್ಯ ನಾನು ಮಾನವ ! ಧನ್ಯ ಧನ್ಯ ಮಾನವನ ಜೀವನ ! "

# ಅಮೃತ ಕುಂಭ



ಅದೆಂದಿಗೂ ಆಗದ ಅಪರಿಮಿತವಾದ ಹಾನಿಗೆ ಮಾನವರು ಗುರಿಯಾಗಿದ್ದರು. ಘನಘೋರ ಸಂಗ್ರಾಮದಿಂದಲೂ ಆಗದಷ್ಟು ಮನುಷ್ಯರ ನಾಶವು ನಡೆದಿದ್ದಿತು. ನಿರ್ದಯ ಶತ್ರುಗಳು ಅವರ ಮೇಲೆ ಏರಿಹೋಗುತ್ತಿದ್ದರು; ದುರ್ಬಲ ಜನರು ಹೇಗೂ ಮಾಡಿ ಜೀವ ಉಳಿಸಿಕೊಳ್ಳಲು ದಿಕ್ಕಾಪಾಲಾಗಿ ಓಡುತ್ತಿದ್ದರು. ಕೈಯಲ್ಲಿ ಸಿಕ್ಕಿದವರ ಮೇಲೆ ದಾಳಿ ಮಾಡುತ್ತ ಆ ತಾಮಸೀ ರಾಕ್ಷಸರು ತಮ್ಮ ತಾಮಸಿಕ ಕ್ಷುಧೆಯನ್ನು ಹಿಂಗಿಸುತ್ತ ನಡೆದಿದ್ದರು. ಅವರ ಕಾಲ್ಕೆಳಗೆ ಎಷ್ಟೋ ಮಾನವರು ತುಳಿಯಲ್ಪಡುತ್ತಿದ್ದರು. ಶತ್ರುಗಳ ಮೇಲ್ಗೈಯಾಗುವುದು ಯಾರಿಗೆ ತಾನೇ ಮಾನ್ಯವಾದೀತು ? ಯಾರಿಗೂ ಆಗಲಾರದು. ಮಾನವರ ನಾಶವು ಯಾರಿಗೆ ನೋಡಲಾದೀತು? ಯಾರಿಗೂ ಆಗಲಾರದು. ತಾಮಸಿಕ ಶತ್ರುಗಳ ಏರಾಟಿಕೆಗೆ ಬಲಿಬಿದ್ದ ಮನುಷ್ಯರ ಆರ್ತಸ್ವರಗಳು ಆ ಸಂಗ್ರಾಮಭೂಮಿಯಲ್ಲಿ ನಿನದಿಸತೊಡಗಿದವು. "ಬಾಂಧವರೇ! ಸಾವಧಾನರಾಗಿರಿ!" ಎಂಬ ಮೃತಜನರ ಕೂಗು ಸಮರಭೂಮಿಯಲ್ಲಿ ಸಂಚರಿಸತೊಡಗಿತು.

ಮಾನವರ ಸಂಹಾರವು ನಡೆದಿರುವುದನ್ನು ನೋಡಿ ದಶದಿಶೆಗಳು ಕುಂದಿದವು. ರವಿರಾಜನು ಸಂತಾಪದಿಂದ ತಪಿಸಿ

ದನು. ಘನಮೇಘಗಳು ಕರಗಿದವು. ವೃಕ್ಷರಾಜರು ಕಂಬನಿ ಕರೆಯುತೊಡಗಿದರು. ಚಂದ್ರಿಕೆಯು ಭಯಭೀತಳಾದಳು. ತಾರಕೆಗಳ ನಿಷ್ಪಾಪ ಹಾಸ್ಯವು ಮಾಯವಾಯಿತು. ರಜನಿಯ ಶಾಂತನಿದ್ರೆಯು ಹಾರಿಹೋಯಿತು. ತನ್ನ ಸೌಂದರ್ಯದಿಂದ ಜನಮನವನ್ನು ಮೋಹಿಸುವ ವನದೇವಿಯು ಬಾಡಿ ಬಸವಳಿ ದಳು. ಸೃಷ್ಟಿದೇವಿಯ ರತ್ನಖಚಿತ ಮುಕುಟವು ಕಪ್ಪೇರಿತು. ಸೃಷ್ಟಿದೇವಿಯ ತೇಜವು ಮಂದವಾಗತೊಡಗಿತು. ಮನುಷ್ಯರ ಸಂಹಾರವನ್ನು ಸೃಷ್ಟಿದೇವಿಯು ಹೇಗೆ ನೋಡುತ್ತ ಕುಳಿತಾಳು ? ತಾಮಸಿಕ ರಕ್ಕಸರ ಮದೋನ್ಮತ್ತತೆಯನ್ನು ಸೃಷ್ಟಿ ದೇವಿಯು ಹೇಗೆ ಸಹಿಸಿಯಾಳು ? ಗುಣವಂತ ಬಾಲಕನನ್ನು ದುರ್ಗುಣಿಗಳಾದ ಅವನ ಒಡಹುಟ್ಟಿದವರು ಸುಮ್ಮಸುಮ್ಮನೆ ಹಿಂಸಿಸಿದರೆ ತಾಯಿಗೆ ಆಗಬಹುದಾದ ನೋವು ಸೃಷ್ಟಿದೇವಿಗೂ ಆಯಿತು. ತನ್ನ ಅಕ್ಕರೆಯ ಮಕ್ಕಳ ಬಿಡುಗಡೆ ಮಾಡಲು ಯಾರಾದರೂ ತತ್‌ಕ್ಷಣ ಧಾವಿಸಿ ಬರಬೇಕೆಂದು ಸೃಷ್ಟಿದೇವಿ ಗನಿಸಿತು. ಆದರೆ....ತನ್ನ ಜೀವದ ಪರಿವೆ ಮಾಡದೆ ಶತ್ರು ಗಳೊಡನೆ ಹೋರಾಡಿ ಅವರನ್ನು ನಾಶಗೊಳಿಸಿ ಮಾನವರ ರಕ್ಷಣೆ ಮಾಡಬಲ್ಲ ಶೂರವೀರನು ಅದೆಲ್ಲಿದ್ದನು ? ಯಾರೊ ಬ್ಬರ ಮನೆಯಲ್ಲಿ ಇರುಳುಹೊತ್ತಿನಲ್ಲಿ ಕಳ್ಳರು ಹೊಕ್ಕರೆ ಅಲ್ಲಿಯ ಒದರಾಟ-ಚೀರಾಟವನ್ನು ಕೇಳಿ ನೆರೆಹೊರೆಯವನು ಎದೆಯೊಡೆದುಕೊಂಡು ತನ್ನ ಮನೆಬಾಗಿಲನ್ನೂ ತೆರೆಯುವು ದಿಲ್ಲ, ಓಕೊಡುವುದೂ ಇಲ್ಲ, ನೆರವೀಯಲು ಧಾವಿಸಿ ಬರು ವುದೂ ಇಲ್ಲ; —ಇಂತಹದೇ ಪರಿಸ್ಥಿತಿಯು ಅಲ್ಲಿದ್ದಿತು. ಮಾನವರೆಲ್ಲ ಎದೆಗುಂದಿದ್ದರು, ಅವರ ಶಕ್ತಿಯು ಹ್ರಾಸವೇ ಆಗಿದ್ದಿತು. ಮನುಷ್ಯರ ಈ ಅಸಹಾಯತೆಯನ್ನು ನೋಡಿ

ಸೃಷ್ಟಿದೇವಿಯು ಚಿಂತಾಕ್ರಾಂತಳಾದಳು.

ಸೃಷ್ಟಿದೇವಿಯ ಸಾಮ್ರಾಜ್ಯವು ಅದೆಷ್ಟು ಪ್ರಚಂಡವು! ಸರದಾರರು, ಸುಬೇದಾರರು ಮೊದಲಾದ ಹಲ ಜನರು ತಮ್ಮ ತಮ್ಮ ಪೋಷಾಕು ಧರಿಸಿ ಸಜ್ಜರಾಗಿದ್ದರು. ದಾಸರೂ ಅಗಣಿತ, ದಾಸಿಯರೂ ಅಗಣಿತ! ಸೃಷ್ಟಿದೇವಿಯ ಓಲಗದ ಕೀರ್ತಿಯು ಸರ್ವತೋಮುಖವಾಗಿತ್ತು. ಇಂತಹ ವೈಭವಶಾಲಿಯಾದ ಸೃಷ್ಟಿದೇವಿಯು ತನ್ನ ಪ್ರೀತಿಯ ಮಕ್ಕಳ ಚಿಂತೆಯಿಂದ ತೀರಾ ಅಸ್ವಸ್ಥಳಾಗಿದ್ದಳು. ತಾಮಸೀ ರಾಕ್ಷಸರ ದಾಳಿಯಿಂದ ಮಾನವರು ಮೃತ್ಯುಮುಖದಲ್ಲಿ ಬೀಳುವ ಕರುಣಕಥೆಯನ್ನು ಅರುಹುವ ಸಂದೇಶವನ್ನು ಸೃಷ್ಟಿದೇವಿಯು ರಾಜ-ರಾಜೇಶ್ವರನಲ್ಲಿಗೆ ಒಬ್ಬ ದೂತನ ಮುಖಾಂತರ ಕಳಿಸಿದಳು. ಆ ದೂತನು ತೀರ ಕೆಳಗೆ ನೋಡುತ್ತ ನಡೆಯುವಂಥವನಾಗಿದ್ದನು. ಹೋಗೆಂದರೆ ಹೋಗುವವ-ಬಾರೆಂದರೆ ಬರುವವನಾಗಿದ್ದನು ಧೈರ್ಯದ ಹಾರಿಕೆಯಾಗಲಿ, ಮೋರೆ ಮೇಲೆತ್ತಿ ನಡೆಯುವುದಾಗಲಿ ಅವನಿಗೆ ಗೊತ್ತೇ ಇರಲಿಲ್ಲ. ಹೇಳಿದ ಕೆಲಸ ಮಾಡುವುದು ಅವನ ಸ್ವಭಾವವಾಗಿರುವಂತೆ, ಅದರಲ್ಲಿಯೇ ತನಗೆ ಎಷ್ಟಾದರೂ ಲಾಭವುಳಿಸಿಕೊಳ್ಳುವುದೂ ಅವನ ದೃಷ್ಟಿಯಾಗಿದ್ದಿತು. ತನ್ನ ವಿಚಾರ-ಪರಿಧಿಯನ್ನು ದಾಟಿ ಅವನ ಮನಸ್ಸೆಂದೂ ಮುಂದಕ್ಕೆ ಹೋಗಲಿಲ್ಲ. ಹಾಗೂ ಪರಿಸ್ಥಿತಿಯ ಆಚೆಗೆ ಹೋಗಿ ಅವನ ದೈವವು ಎಂದೂ ಸುಸ್ಥಿತಿಯಲ್ಲಿ ಪ್ರವೇಶ ಮಾಡಲಿಲ್ಲ. ದೂತನು ಇಂತು ಸೃಷ್ಟಿದೇವಿಯ ಸಂದೇಶದೊಡನೆ ಹೊರಟನು. ಹಾದಿಯಲ್ಲಿ ಆತನು ತನ್ನಷ್ಟಕ್ಕೇ ಅಂದುಕೊಳ್ಳುತ್ತ ನಡೆದನು— "ಈ ಸಂಗ್ರಾಮವು ನಡೆದದ್ದು ಒಳ್ಳೆಯದೇ ಆಯಿತು. ಅದರಿಂದ ನನ್ನ ದೈವ ತೆರೆಯಿತು!

ಹೋ! ಈ ಸಂಗ್ರಾಮದಿಂದ ದೇವರ ದರ್ಬಾರವನ್ನಾದರೂ ನೋಡಲು ನನಗೆ ದೊರೆಯಿತು. ಸೃಷ್ಟಿಸಾಮ್ರಾಜ್ಯಕ್ಕಿಂತ ಅಲ್ಲಿ ಹೆಚ್ಚಿನ ಗಳಿಕೆ ದೊರೆತರೆ ಅಲ್ಲಿಯೇ ಕೆಲಸಕ್ಕೆ ನಿಂತು ಕೊಂಡರಾಯಿತು! ನನಗೇನು! ನಾಲ್ಕು ದುಡ್ಡು ಹೆಚ್ಚಿಗೆ ಸಿಕ್ಕಿದರೆ ಸಾಕು! ಖಾನಾ-ಪೀನಾ-ಮಜಾ ಕರನಾ! ಇಷ್ಟೇ ನನ್ನ ಧ್ಯೇಯ! ಇದರಾಚೆಗೆ ಇರುವ ಪಾಪಿರೂ ಏನು? ನನ್ನ ಲಾಭ ಮಾಡಿಕೊಡುವ ಸಂಗ್ರಾಮವೇ, ನಿನ್ನ ಜಯಜಯ ಕಾರ ಮಾಡುವೆನು! ಒಬ್ಬರು ಸತ್ತರೆ ಒಬ್ಬರು ಹುಟ್ಟು ವರು! ಒಬ್ಬರು ಅತ್ತರೆ ಒಬ್ಬರು ನಗುವರು! ಒಬ್ಬರಿಗೆ ಹಾನಿಯಾದರೆ ಒಬ್ಬರಿಗೆ ಲಾಭ! ಶತ್ರುಗಳು ಬಲಶಾಲಿಗಳಾ ದರೆ ಮನುಷ್ಯರ ನಾಶ! ಮನುಷ್ಯರು ಬಲಶಾಲಿಗಳಾದರೆ ಶತ್ರುಗಳ ನಾಶ. ಈ ಜಗತ್ತು ಅದೆಷ್ಟು ಮೋಜಿನದಾಗಿದೆ!'' ಹೀಗೆ ಯೋಚಿಸುತ್ತಿರುವಾಗಲೇ ದೂತನು ದೇವರ ದರ್ಬಾರದ ಬಾಗಿಲಿಗೆ ಬಂದು ತಲುಪಿದನು. ರಾಜರಾಜೇಶ್ವರನು ಯೋಗ ನಿದ್ರೆಯಲ್ಲಿದ್ದನು. ಅದನ್ನು ನೋಡಿ ದೂತನೆಂದನು—''ಮಾನ ವರ ಮೇಲೆ ಶತ್ರುಗಳ ದಾಳಿ ನಡೆದಿರುವಾಗ ರಾಜರಾಜೇ ಶ್ವರನಿಗೆ ಹೀಗೆ ಶಾಂತನಿದ್ರೆ ಬಂದಿತೆಂತು? ಇಂತಹ ಅಲ್ಲೋಲ ಕಲ್ಲೋಲದಲ್ಲಿ ನನಗಂತೂ ಜಂಪು ಕೂಡ ಬರಲಾರದು! ರಾತ್ರಿಸಮಯದಲ್ಲಿ ಹತ್ತಿರದ ಕೂಸೊಂದು ಅರಚಿದರೆ ನಿದ್ರಾ ಭಂಗವಾಗುವುದು, ಈಗಂತೂ ಸೃಷ್ಟಿಯಲ್ಲಿ ಹಾಹಾಕಾರ ವೆದ್ದಿದೆ! ಸಿರಿವಂತರಿಗೆ ಬಡವರ ದಯೆಯೇ ಇರುವದಿಲ್ಲ ಎಂದು ಜನರೆನ್ನುವುದು ಸರಿಯೇ ಇದೆ! ತಮ್ಮ ತಲೆ ನೋಯಿ ಸಿದರೆ ನಿದ್ದೆ ಬಾರದೆಂಬುದು ಸ್ವಾಭಾವಿಕವೇ! ಆದರೆ ಹೆರರ ತಲೆ ನೋಯಿಸಿದರೆ ತನಗೆ ನಿದ್ದೆ ಬಾರದಿರಲು ಕಾರಣವೇನು?

ತಾನು ಎಡಹಿಬಿದ್ದರೆ ಅಳು ಬರುವುದು, ಇನ್ನೊಬ್ಬರು ಬಿದ್ದರೆ ನಗು ಬರುವುದು ಸಹಜವೇ!" .... ಈ ರೀತಿ ತನ್ನಷ್ಟಕ್ಕೆ ತಾನೇ ವಟಗುಡುತ್ತ ದೂತನು ಹೊರಗೆ ತಿರುಗಾಡಹತ್ತಿದನು. ಹೊರಗಿನ ಭವ್ಯ ಪರಿಸರದಲ್ಲಿ ಫೈಲುಗಳ ರಾಶಿಯು ಪರ್ವತಾಕಾರವಾಗಿ ಬಿದ್ದಿತ್ತು. ರಾಜರಾಜೇಶ್ವರನ ಆಪ್ತ ಕಾರ್ಯದರ್ಶಿಯು ಲಕ್ಷ್ಯಪೂರ್ವಕವಾಗಿ ಏನನ್ನೋ ಬರೆಯುತ್ತ ಕುಳಿತಿದ್ದನು. ದೂತನು ಪ್ರಣಾಮ ಮಾಡಿ ಹತ್ತಿರದಲ್ಲಿಯೇ ಕುಳಿತನು. ಆಪ್ತಕಾರ್ಯದರ್ಶಿಯು ಒಂದು ಫೈಲು ಮುಗಿಸಿ ಕೆಳಗಿರಿಸಿದೊಡನೆಯೇ ದೂತನು ಬೆಸಗೊಂಡನು—"ಮಹಾಶಯರೇ! ತಾವು ಬರೆಯುತ್ತಿರುವುದು ಅದೇನು?" ಆಪ್ತಕಾರ್ಯದರ್ಶಿ ಉತ್ತರಿಸಿದನು— "ರಾಜರಾಜೇಶ್ವರನ ನಿತ್ಯದ ವೆಚ್ಚದ ಲೆಕ್ಕವನ್ನು!" ದೂತನೆಂದುಕೊಂಡನು—"ಆಡಂಬರವಿಲ್ಲದ್ದು—ಅಲಂಕಾರವಿಲ್ಲದ್ದು ದೇವರ ದರ್ಬಾರ! ಶೂನ್ಯಗಗನವೇ ಅದರ ಆಸ್ಥಾನ! ಇಲ್ಲಿ ಏನು ವೆಚ್ಚ ಬರಬೇಕಾಗಿದೆ!" ಹೀಗೆನ್ನುತ್ತ ಆತನು ಆ ಫೈಲನ್ನು ತೆರೆದು, ಅದರಲ್ಲಿಯ ಅಂಕೆಗಳನ್ನು 'ಏಕಂ, ದಹಂ, ಶತಂ, ಸಹಸ್ರ, ದಶಸಹಸ್ರ' ಎನ್ನುತ್ತ 'ಖರ್ವ, ನಿಖರ್ವ, ಪದ್ಮ, ಮಹಾಪದ್ಮ'ಗಳಾಚೆಗೆ ಎಲ್ಲವುಗಳನ್ನು ಮುಗಿಸಿದರೂ ಅವು ತೀರದಾದವು! ಆ ಪ್ರಚಂಡ ವೆಚ್ಚ ನೋಡಿ ದೂತನು ದಿಗ್ಭ್ರಾಂತನಾದನು. ಬೇರೆ ಬೇರೆ ಖಾತೆಗಳ ಬೇರೆ ಬೇರೆ ಫೈಲುಗಳನ್ನು ನೋಡಿ ದೂತನು ಆಪ್ತಕಾರ್ಯದರ್ಶಿಗೆ ಕೇಳಿದನು—"ಮಹಾಶಯರೇ! ಇಷ್ಟು ಅಗಣಿತ ಖಾತೆಗಳನ್ನು ನೋಡುವವರಾದರೂ ಯಾರು, ಹಾಗೂ ಅವುಗಳ ನಿಯಂತ್ರಣವನ್ನು ಮಾಡುವವರಾದರೂ ಯಾರು? ಆಪ್ತಕಾರ್ಯದರ್ಶಿಯು

ಚಟ್ಟನೆ ಉತ್ತರಿಸಿದನು— “ಯಾರೆಂದರೆ! ರಾಜರಾಜೇಶ್ವರನು!” ಆಪ್ತಕಾರ್ಯದರ್ಶಿಯು ಮುಂದುವರಿದನು— “ತ್ರೈಲೋಕ್ಯದ ಕೀಲಿಕೈಗಳು ರಾಜರಾಜೇಶ್ವರನ ಕೈಯಲ್ಲಿವೆ! ಇಲ್ಲಿ ಸೂತ್ರಗಳನ್ನಾಡಿಸುವುದರಿಂದ ತ್ರೈಲೋಕ್ಯದ ರಾಜ್ಯಭಾರವು ನಡೆಯುತ್ತದೆ!” ಇದನ್ನು ಕೇಳಿ ದೂತನು ಭ್ರಮಿಷ್ಟನಾದಂತವನಾಗಿ ಆಪ್ತಕಾರ್ಯದರ್ಶಿಯ ಕಡೆಗೆ ನೋಡುತ್ತ ನಿಂತನು. ಆಪ್ತಕಾರ್ಯದರ್ಶಿಯು ತಿಳಿಹೇಳುತ್ತ ಇಂತೆಂದನು— “ಎಲಾ! ಹೀಗೇಕೆ ಗೊಂದಲಗೆಡುತ್ತಿರುವೆ? ಇದು ನೋಡು—ಶರೀರವನ್ನು ಸುವ್ಯವಸ್ಥಿತವಾಗಿ ನಡೆಯಿಸಿಕೊಂಡು ಹೋಗುವ ಸರ್ವಾಧಿಕಾರಿಯಾದ ಮಿದುಳು ಶರೀರದಲ್ಲಿ ಅತ್ಯುನ್ನತ ಸ್ಥಾನದಲ್ಲಿದ್ದು ಶರೀರಕ್ಕೆ ಚಾಲನೆ ಕೊಡುವಂತೆ, ರಾಜರಾಜೇಶ್ವರನು ಇಲ್ಲಿಂದಲೇ ಜಗತ್ತಿನ ಸೂತ್ರಚಾಲನೆ ಮಾಡುತ್ತಾನೆ.” ಮಾತು ಮುಗಿಯುವ ಪೂರ್ವದಲ್ಲಿಯೇ ದೂತನು ತನ್ನೊಳಗೇ ಆಲೋಚಿಸತೊಡಗಿದನು— “ಇದೆಂತು ಶಕ್ಯ? ಏನಂತೆ—ರಾಜರಾಜೇಶ್ವರನು ಇಲ್ಲಿಂದಲೇ ತ್ರೈಲೋಕ್ಯಕ್ಕೆ ಚಾಲನೆ ಕೊಡುತ್ತಾನೆ! ಇದನ್ನು ಯಾರಾದರೂ ನಂಬುವುದು ಕೂಡ ಕಷ್ಟ! ಗೋಡೆಯ ಆಚೆಗೆ ನಡೆದಿರುವುದು ಕಾಣುವುದೂ ಇಲ್ಲ, ತಿಳಿಯುವುದೂ ಇಲ್ಲ! ಆದರೆ....ಅಂತೆ—ಇಲ್ಲಿಂದ ತ್ರೈಲೋಕ್ಯ ಕಾಣುತ್ತದೆ—ಅದರ ವ್ಯವಹಾರ ನಡಿಸಲಾಗುತ್ತದೆ! ರಾಜರಾಜೇಶ್ವರನಿಗೆ ಈ ತ್ರೈಲೋಕ್ಯ ಕಾಣುತ್ತಿದ್ದರೆ ಸೃಷ್ಟಿಸಾಮ್ರಾಜ್ಯದಲ್ಲಿ ನಡೆದ ಪ್ರಚಂಡ ಸಂಹಾರವು ಅವನಿಗೆ ಕಾಣುತ್ತಿರಲಿಲ್ಲವೆ? ಅವನ ಕೈಯಲ್ಲಿಯೇ ಇದರ ಸೂತ್ರಗಳಿದ್ದುದು ನಿಜವಿದ್ದರೆ ಅವನು ಈ ಸಂಹಾರವನ್ನು ನಿಲ್ಲಿಸುತ್ತಿರಲಿಲ್ಲವೇ? ರಾಜರಾಜೇಶ್ವರನ ಸೇವಕನು ರಾಜ

ರಾಜೇಶ್ವರನ ಕೀರ್ತಿಗಾನ ಮಾಡುವುದು ಸಾಭಾವಿಕವೇ ಇದೆ! ಹಾಗೆಂದು ಅದನ್ನು ನಾನು ನಂಬಲೇ ? ಛೀ ! ಇಲ್ಲಿ ಎಲ್ಲವೂ ತಿರುವುಮುರುವು! ಆಚಾರ ವಿಚಾರದಲ್ಲಿಯೂ ಇಲ್ಲಿ ಭಿನ್ನತೆ ಇದೆ. ಯಾವುದರ ಸಾಮ್ಯವೂ ಇಲ್ಲಿಲ್ಲ. ಸಾಮ್ಯವಿಲ್ಲದ ಈ ಅಸಾಮಾನ್ಯತೆಯಲ್ಲಿ ಸೃಷ್ಟಿಸಾಮ್ರಾಜ್ಯದಿಂದ ಯಾರು ಬರ ಲಿಚ್ಛಿಸಿಯಾರು ? " ದೂತನು ಇಂತು ಯೋಜನೆ ನಡೆಯಿಸಿ ರುವಷ್ಟರಲ್ಲಿ ಚಂಡಮಾರುತನು ಬೀಸತೊಡಗಿದನು. ಬಿರು ಗಾಳಿಯಲ್ಲಿ ಸಿಕ್ಕಿದ ಕಾಗದದ ಚೂರಿನಂತೆ ಗತಿಯಾಯಿತು ದೂತನದು ! ಆಧಾರ ತಪ್ಪಿದವನಾಗಿ ಗಾಳಿಯಲ್ಲಿ ಗರಗರನೆ ತಿರುಗುತ್ತ ಭೂಮಿಯ ಮೇಲೆ ಅಪ್ಪಳಿಸಿದನು.

ತನ್ನ ಮಕ್ಕಳ ಕಕ್ಕುಲತೆಯಿಂದ ಚಿಂತಾಕ್ರಾಂತಳಾದ ಸೃಷ್ಟಿದೇವಿಯು ದೂತನ ಬರವನ್ನೇ ಕಾಯ್ದುಕೊಂಡು ಕುಳಿ ತಿದ್ದಳು. ದೂತನು ಬಂದೊಡನೆ " ರಾಜರಾಜೇಶ್ವರನ ಬೆಟ್ಟಿಯಾಯಿತೇ ? " ಎಂದು ಆಸೆಯಿಂದ ಕೇಳಿದಳು ದೂತನು ಎಲ್ಲ ವರ್ತಮಾನವನ್ನು ಅರುಹಿದೊಡನೆ ಸೃಷ್ಟಿ ದೇವಿಯು ನಿಟ್ಟುಸಿರುಬಿಟ್ಟು, ತುಂಬಾ ವಿಚಾರಮಗ್ನಳಾದಳು. ವಿಚಾರತಂದ್ರೆಯಿಂದ ಎಚ್ಚರಿಕೆಯಾದೊಡನೆ ಅವಳ ನಿಟ್ಟು ಸಿರು ನಿಂತವು, ನೇತ್ರಗಳೊಳಗಿಂದ ವೃಷ್ಟಿಯು ಹೊರಬರ ತೊಡಗಿತು, ಬಾಡಿದ ವದನಮುದ್ರೆಯು ಅರಳಿತು. ನಿರಾಶೆ ಯೊಳಗಿಂದ ಆಶೆಯು ಉದಯಿಸುವಂತೆ, ಕಗ್ಗತ್ತಲೆಯಲ್ಲಿ ಬೆಳ್ಳಿಚಿಕ್ಕೆ ಬೆಳಗುವಂತೆ, ಮರುಭೂಮಿಯಲ್ಲಿ ನೀರಿನ ಸೆಲೆ ಸಿಕ್ಕಿದಂತೆ, ನಿರ್ಜನ ಪ್ರದೇಶದಲ್ಲಿ ಕಾಲುದಾರಿ ಕಂಡುಬರು ವಂತೆ ಸೃಷ್ಟಿದೇವಿಗನಿಸಿತು. ಅವಳು ಆಶೆಯಿಂದೆದ್ದಳು. ಒಂಬತ್ತು ಬಣ್ಣದ ಶಾಲು ಹೊದ್ದುಕೊಂಡಳು. ಬಂಗಾರದ

ತೆನೆ ತೆಗೆದ ಹಸಿರು ಕುಪ್ಪಸ ತೊಟ್ಟುಕೊಂಡಳು. ಅವರೌಲ. ಭೂಷಣಗಳನ್ನು ಹಾಕಿಕೊಂಡಳು. ಮಸ್ತಕದಲ್ಲಿ ಮಣಿಮುಕುಟ ವನ್ನು ಧರಿಸಿದಳು. ಹಾಗೂ ರಾಜರಾಜೇಶ್ವರನ ಬೆಟ್ಟಿಗೆ ಹೊರಟಳು.

ರಾಜರಾಜೇಶ್ವರನು ಆದೇ ಯೋಗನಿದ್ರೆಯೊಳಗಿಂದ ಎಚ್ಚ ರಿಯುತ್ತಿದ್ದನು ಅಷ್ಟರಲ್ಲಿ ಸೃಷ್ಟಿದೇವಿಯು ಅಲ್ಲಿ ಬಂದು ತಲುಪಿದಳು. ವನದೇವಿಯಿತ್ತ ಸುಂದರ-ಸುಕುಮಾರ-ಸುಗಂ ಧಿತ ಕುಸುಮಗಳನ್ನು ಪ್ರಭುಚರಣಗಳಲ್ಲಿ ಅರ್ಪಿಸಿ ಸೃಷ್ಟಿ ದೇವಿಯು ವಿನಯದಿಂದ ಬದಿಗೆ ನಿಂತಳು. ಪ್ರಭುವು ಪ್ರೇಮ ದಿಂದ ಪುಷ್ಪಗಳನ್ನು ಸ್ವೀಕರಿಸಿ, ಸಮೀಪದ ಆಸನದಲ್ಲಿ ಸೃಷ್ಟಿ-ದೇವಿಗೆ ಕುಳ್ಳಿರಹೇಳಿದನು. ಸೃಷ್ಟಿದೇವಿಯು ತನ್ನ ಮುದ್ದು ಮಕ್ಕಳ ಪ್ರಾಣಹಾನಿಯಾಗುತ್ತಿರುವುದನ್ನು ಪ್ರಭುವಿನಲ್ಲಿ ಅರಿಕೆ ಮಾಡಿಕೊಂಡಳು. ಸೃಷ್ಟಿದೇವಿಯೆಂದಳು–"ಸ್ವಾಮಿನ್, ತಾಮಸೀ ರಾಕ್ಷಸರ ಹಾವಳಿಯನ್ನು ಹೇಳಲಾಸಲ್ಲ. ಅವರು ಮಾನವರ ಮೇಲೆ ದಾಳಿ ನಡೆಯಿಸಿದ್ದಾರೆ, ಅವರ ಸೊತ್ತನ್ನೆಲ್ಲ ಸುಲಿಯುತ್ತಿದ್ದಾರೆ, ಅವರ ಮನೆಮಾರು ಸುಟ್ಟುಹಾಕು ತ್ತಿದ್ದಾರೆ. ರಾಕ್ಷಸರಿಂದ ಮನುಷ್ಯರನ್ನು ರಕ್ಷಿಸಿರೆಂದು ನಾನು ಪ್ರಾರ್ಥಿಸುವೆ. ನನ್ನ ಸಾಮ್ರಾಜ್ಯದೊಳಗಿನ ಸ್ವಾಸ್ಥ್ಯವೇ ನಷ್ಟವಾಗಿ ಬಿಟ್ಟಿದೆ. ಐಕ್ಯವು ಹೋಗಿ, ಯಾದವೀ ಕಲಹವು ತಲೆದೋರಿದೆ. ಸುಖದ ತಣ್ಣೆಳಲು ಮಾಯವಾಗಿ, ದುಃಖದ ಕಾಳ್ಕಿಚ್ಚು ಹಬ್ಬಿದೆ." ಆಗ ರಾಜರಾಜೇಶ್ವರನು ಗಂಭೀರ ಮುದ್ರೆಯಿಂದೆಂದನು— "ಇಂತಹ ಅನಿಷ್ಟ ಪರಿಸ್ಥಿತಿಯು ಉಂಟಾದುದು ಹೇಗೆ? ಮಾನವರ ಸೀಮೆಯಲ್ಲಿ ರಾಕ್ಷಸರು ಆದಾರ ಅನುಮತಿಯಿಂದ ಕಾಲಿಟ್ಟರು? ಮಾನವರ ಮನೆ

ಗಳಲ್ಲಿ ಅವರೆಂತು ಪ್ರವೇಶಿಸಿದರು ? ಸೃಷ್ಟಿಸಾಮ್ರಾಜ್ಯವನ್ನು ನಿರ್ಮಿಸುವಾಗ, ಪಶು, ಪಕ್ಷಿ, ಜಲಚರ, ವನಚರ, ರಾಕ್ಷಸರು, ಮಾನವರು ಇವರ ಬೇರೆ ಬೇರೆ ವಿಭಾಗಗಳನ್ನು ಅವರವರ ಪ್ರಕೃತಿಗನುಸಾರವಾಗಿ ಮಾಡಿ, ಅವರವರಿಗೆ ಸುಖಜೀವನದ ಏರ್ಪಾಡನ್ನು ಮಾಡಲಾಗಿದ್ದಿತು. ಮನುಷ್ಯರನ್ನು ಅವರ ಶತ್ರುಗಳಿಂದ ದೂರವಿರಿಸಿರುವಾಗ ಈ ಗೊಂದಲವು ಎಂತಾಯಿತು ? ಅನುಕೂಲತೆ ದೊರೆಯದಿದ್ದರೆ ರೋಗಗಳು ಕೂಡ ದೇಹದಲ್ಲಿ ಪ್ರವೇಶಿಸಲಾರವು ಎಂದಾಗ ತಾಮಸೀ ರಾಕ್ಷಸರು ಮನುಷ್ಯರ ಮೇಲೆ ದಾಳಿ ಮಾಡಲು ಸ್ವೇಚ್ಛೆಯಿಂದ ಧೈರ್ಯ ಪಡಬಲ್ಲರೇ ? ಅವರನ್ನು ಕರೆದ ಹೊರತು, ಅವರನ್ನು ಬರಗೊಟ್ಟ ಹೊರತು, ಇಲ್ಲವೆ ಅವರೊಡನೆ ಸ್ನೇಹ ಬೆಳಸಿದ ಹೊರತು ಮಾನವರ ಮನೆಗಳಲ್ಲಿ ಅವರು ಕಾಲಿಡಲಾರರು." ಪ್ರಭು ಮುಂದರಿದೆಂದನು— "ನಿನ್ನ ಅಕ್ಕರೆಯ ಮಕ್ಕಳ ಹಿತದೃಷ್ಟಿಯಿಂದ ನಾವು ರಾಕ್ಷಸರ ಮೇಲೆ ಕಠೋರ ನಿರ್ಬಂಧಗಳನ್ನು ಹಾಕಿದ್ದೆವು. ಇದು ನಿನ್ನ ನೆನಪಿಗೆ ಬರುವುದೇ? ರಾಕ್ಷಸರು ಮನುಷ್ಯರ ಕ್ಷೇತ್ರದಲ್ಲಿ ಹೋಗಬಾರದೆಂಬ ನಿಯಮವನ್ನು ಅವರು ಪಾಲಿಸುತ್ತಿದ್ದರು. ಆದರೆ ಮಾನವರು ಅವರನ್ನು ಕರೆದರೂ ಅವರು ಹೋಗಬಾರದೆಂಬ ನಿರ್ಬಂಧವನ್ನು ಮಾತ್ರ ಅವರ ಮೇಲೆ ಹಾಕಿದ್ದಿಲ್ಲ. ನಿನ್ನ ಮಕ್ಕಳು ನಿಯಮ ಮೀರಿದರು, ಶಿಸ್ತು ಮುರಿದರು. ಇದರ ದುಷ್ಪರಿಣಾಮವಿದು. ಸುಡುವುದು ಬೆಂಕಿಯ ಸ್ವಭಾವವಿರುವಂತೆ, ಹೆರರ ನಾಶ ಮಾಡುವುದು ರಾಕ್ಷಸರ ಸ್ವಭಾವವಾಗಿದೆ. ನಿಯಮವೂ ಶಿಸ್ತೂ ನಿನ್ನ ಸಾಮ್ರಾಜ್ಯದ ಕೋಟೆಕೊತ್ತಲಗಳೇ ಆಗಿವೆ. ಅವುಗಳಲ್ಲಿ ಬಿರುಕು ಬಿದ್ದರೆ ಶತ್ರುಗಳು ಒಳನುಗ್ಗುವುದು

ಪ್ರಾಪ್ತವೇ ಇದೆ. ಅವರು ಶತ್ರುಗಳೇ; ಅವರು ಇಂಥದರ ದಾರಿಯನ್ನೇ ಕಾಯುತ್ತಿರುವರು. ನಿಯಮಗಳ ಕೋಟೆ ಕೊತ್ತಳ ಕಟ್ಟಿ, ಶಿಸ್ತಿನ ಸ್ತಂಭವನ್ನೂರಿ, ಆ ಸಾಮ್ರಾಜ್ಯದ ಸಿಂಹಾಸನವನ್ನು ನಿಮಗೆ ನಾವು ಒಪ್ಪಿಸಿದ್ದೆವು. ಇದರ ಸ್ಮೃತಿ ಯಿದೆಯೇ ? " ಸೃಷ್ಟಿದೇವಿಯು ಅಹುದೆಂದು ಸೂಚಿಸುತ್ತ ತಲೆಯಲ್ಲಾಡಿಸಿದಳು. ಅವಳ ಹೃದಯವು ತುಂಬಿಬಂದು, ಗದ್ಗದ ಕಂಠದಿಂದೆಂದಳು—" ಸ್ವಾಮಿನ್, ಸದ್ಯದ ಪರಿಸ್ಥಿತಿ ಹಾಗೇ ಉಳಿದರೆ ಹತಬಲವಾದ ಮಾನವ ವಂಶವೃಕ್ಷವು ಸಮೂಲವಾಗಿ ಕೆಡಹಲ್ಪಟ್ಟು ಬಿದ್ದು ಬಿಡುವುದೆಂದು ನನಗೆ ಭಯವುಂಟಾಗಿದೆ. ಇಂದಿನ ಬಿಕ್ಕಟ್ಟಿನಲ್ಲಿ ತಾವೇ ನಮಗೆ ಆಧಾರರು. ತಮ್ಮ ಹೊರತು ಈ ಮನುಷ್ಯಸಂಹಾರವನ್ನು ಯಾರು ನಿಲ್ಲಿಸಿಯಾರು ? " ಸೃಷ್ಟಿದೇವಿಯ ಕುತ್ತಿಗೆಯ ಶಿರಗಳು ಬಿಗಿದು ಬಂದು, ಅವಳು ಮುಂದೆ ಮಾತನಾಡ ಲಾರದಾದಳು. ಮಕ್ಕಳ ಮೇಲಿನ ವಾತ್ಸಲ್ಯದಿಂದ ಅವಳ ಕಣ್ಣುಗಳಿಂದ ಹರಿಯುವ ಅಶ್ರುಧಾರೆಯನ್ನು ನೋಡಿ ಪ್ರಭು ವೆಂದನು—"ಸೃಷ್ಟಿದೇವೀ ! ಮೊದಲು ನೀನು ನಿನ್ನ ಮಕ್ಕಳಿಗೆ ನಿಯಮದಂತೆ ನಡೆಯಲು ಕಲಿಸು. ತರುವಾಯ ಶಿಸ್ತಿನ ಶಿಕ್ಷಣ ಕೊಡು. ಹಾಗೂ ಆಜ್ಞಾಪಾಲನದ ಪಾಠ ಕೊಡು.' ಇಷ್ಟರಿಂದ ಅವರಲ್ಲಿ ಧೈರ್ಯವು ಒಡಮೂಡುವುದು. ಅಲ್ಲಿಯ ವರೆಗೆ ಮಾನವರನ್ನು ರಕ್ಷಿಸುವ ಏರ್ಪಾಡನ್ನು ನಾವು ಮಾಡು ವೆವು. " ಭಗವಂತನ ಆಶ್ವಾಸನ ಕೇಳಿ ಸೃಷ್ಟಿದೇವಿಯ ಹೃದಯದ ಮೇಲಿನ ದೊಡ್ಡ ಭಾರವು ಇಳಿಯಿತು. ಅವಳು ಕೃತಜ್ಞತೆಯಿಂದ ಪ್ರಭುಚರಣಗಳನ್ನು ನಮಸ್ಕರಿಸಿ ಮರಳಿ ದಳು.

ಗೂಢವಿಚಾರದಲ್ಲಿ ಮಗ್ನನಾದ ರಾಜರಾಜೇಶ್ವರನು ಬೆನ್ನ ಹಿಂದೆ ಕೈಕಟ್ಟಿ ತನ್ನ ಮಹಲಿನಲ್ಲಿ ಸಾವಕಾಶವಾಗಿ ಶತಪಥ ಮಾಡುತ್ತಿದ್ದನು. ಹಾಗೆ ಅಡಿಯಿಡುತ್ತಿರುವಾಗಲೆ ಒಂದು ಬಾಗಿಲಬಳಿ ನಿಂತು ಯಾರನ್ನೊ ಕರೆದನು. ಒಡನೆಯೆ ಒಬ್ಬ ಸುಂದರ ತರುಣನು ಓಡುತ್ತ ಬಂದು ಆದರದಿಂದ ತಲೆವಾಗಿ ನಿಂತನು; ಯಾರ ಕಣ್ಗಳನ್ನೂ ಸೆಳೆಯುವ ಅಸದಳ ಚೆಲುವು ಆವನದಾಗಿತ್ತು. ಕೇದಿಗೆಯ ಬಣ್ಣ, ವಿಶಾಲವೂ ತೇಜಸ್ವಿಯೂ ಆದ ಕಣ್ಣು, ಭವ್ಯ ಭಾಲಪ್ರದೇಶ, ಶಾಂತವೂ ಪ್ರಫುಲ್ಲವೂ ಆದ ಮುದ್ರೆ, ಅದರಲ್ಲಿ ಸ್ಪಷ್ಟವಾಗಿ ಮೂಡಿದ ಧೀರೋದಾತ್ತತೆ, ಪರಾಕ್ರಮಶಾಲಿ ವೀರನಿಗೊಪ್ಪುವ ಗಾಂಭೀರ್ಯ, ಸುದೃಢವೂ ಸತೇಜವೂ ಹುರಿಕಟ್ಟಾದುದೂ ಆದ ಮೈಕಟ್ಟು ಆತನದಾಗಿದ್ದಿತು. ಅಂತಹ ಆ ಧೀರೋದಾತ್ತ ಸ್ವರೂಪವನ್ನು ನೋಡಿ ಪ್ರಭುವು ಸುಪ್ರಸನ್ನನಾದನು, ಆ ತೇಜಸ್ವಿ ತರುಣನ ಬೆನ್ನಮೇಲೆ ಕೈಯಾಡಿಸುತ್ತ ಭಗವಂತನೆಂದನು— "ಶೂರವೀರನೇ! ಸೃಷ್ಟಿಸಾಮ್ರಾಜ್ಯದಲ್ಲಿ ಮಾನವರ ಸಂಹಾರ ನಡೆದಿದೆ. ಅಲ್ಲಿ ಕೂಡಲೆ ಹೋಗಿ, ರಾಕ್ಷಸರೊಡನೆ ಹೋರಾಡಿ, ಮಾನವರ ರಕ್ಷಣೆ ಮಾಡು. ಇಂತಹ ಜೀವನ–ಮರಣದ ಪ್ರಸಂಗದಲ್ಲಿ ನೀನೇ ಅವರಿಗೆ ಆಧಾರ, ನೀನೇ ಅವರಿಗೆ ಶೀತಲಛಾಯೆ, ನೀನೇ ಅವರಿಗೆ ವಿಶ್ರಾಮಧಾಮ. ಭಗವಂತನ ಆಜ್ಞೆಯಾದೊಡನೆಯೇ ವೀರತರುಣನು ಆತನ ಚರಣಕ್ಕೆರಗಿ, ಸೃಷ್ಟಿಯ ಮೇಲೆ ಅವತೀರ್ಣನಾದನು.

ಎಲ್ಲೆಲ್ಲಿಯೂ ಆಶೆಯ ಮಂದಮಾರುತನು ತೀಡಹತ್ತಿದನು. ತನ್ನ ಗುಣವಂತ ಸುಪುತ್ರನ ಮೃತಶರೀರದಲ್ಲಿ ಹೊರಟು ಹೋದ ಪ್ರಾಣವು ಪುನಃ ಪ್ರವೇಶಿಸಿದರೆ ಮಾತೆಗೆ ಎಷ್ಟು

ಪ್ರಾಪ್ತವೇ ಇದೆ. ಅವರು ಶತ್ರುಗಳೇ; ಅವರು ಇಂಥದರ ದಾರಿಯನ್ನೇ ಕಾಯುತ್ತಿರುವರು. ನಿಯಮಗಳ ಕೋಟೆ ಕೊತ್ತಳ ಕಟ್ಟಿ, ಶಿಸ್ತಿನ ಸ್ತಂಭವನ್ನೂರಿ, ಆ ಸಾಮ್ರಾಜ್ಯದ ಸಿಂಹಾಸನವನ್ನು ನಿಮಗೆ ನಾವು ಒಪ್ಪಿಸಿದ್ದೆವು. ಇದರ ಸ್ಮೃತಿ ಯಿದೆಯೋ ?" ಸೃಷ್ಟಿದೇವಿಯು ಅಹುದೆಂದು ಸೂಚಿಸುತ್ತ ತಲೆಯಲ್ಲಾಡಿಸಿದಳು. ಅವಳ ಹೃದಯವು ತುಂಬಿಬಂದು, ಗದ್ಗದ ಕಂಠದಿಂದೆಂದಳು—"ಸ್ವಾಮಿನ್, ಸದ್ಯದ ಪರಿಸ್ಥಿತಿ ಹಾಗೇ ಉಳಿದರೆ ಹತಬಲವಾದ ಮಾನವ ವಂಶವೃಕ್ಷವು ಸಮೂಲವಾಗಿ ಕಡಹಲ್ಪಟ್ಟು ಬಿದ್ದು ಬಿಡುವುದೆಂದು ನನಗೆ ಭಯವುಂಟಾಗಿದೆ. ಇಂದಿನ ಬಿಕ್ಕಟ್ಟಿನಲ್ಲಿ ತಾವೇ ನಮಗೆ ಆಧಾರರು. ತಮ್ಮ ಹೊರತು ಈ ಮನುಷ್ಯಸಂಹಾರವನ್ನು ಯಾರು ನಿಲ್ಲಿಸಿಯಾರು ?" ಸೃಷ್ಟಿದೇವಿಯ ಕುತ್ತಿಗೆಯ ಶಿರಗಳು ಬಿಗಿದು ಬಂದು, ಅವಳು ಮುಂದೆ ಮಾತನಾಡ ಲಾರದಾದಳು. ಮಕ್ಕಳ ಮೇಲಿನ ವಾತ್ಸಲ್ಯದಿಂದ ಅವಳ ಕಣ್ಣುಗಳಿಂದ ಹರಿಯುವ ಅಶ್ರುಧಾರೆಯನ್ನು ನೋಡಿ ಪ್ರಭು ವೆಂದನು—"ಸೃಷ್ಟಿದೇವೀ ! ಮೊದಲು ನೀನು ನಿನ್ನ ಮಕ್ಕಳಿಗೆ ನಿಯಮದಂತೆ ನಡೆಯಲು ಕಲಿಸು. ತರುವಾಯ ಶಿಸ್ತಿನ ಶಿಕ್ಷಣ ಕೊಡು. ಹಾಗೂ ಆಜ್ಞಾಪಾಲನದ ಪಾಠ ಕೊಡು.' ಇಷ್ಟರಿಂದ ಅವರಲ್ಲಿ ಧೈರ್ಯವು ಒಡಮೂಡುವುದು. ಅಲ್ಲಿಯ ವರೆಗೆ ಮಾನವರನ್ನು ರಕ್ಷಿಸುವ ಏರ್ಪಾಡನ್ನು ನಾವು ಮಾಡು ವೆವು." ಭಗವಂತನ ಆಶ್ವಾಸನ ಕೇಳಿ ಸೃಷ್ಟಿದೇವಿಯ ಹೃದಯದ ಮೇಲಿನ ದೊಡ್ಡ ಭಾರವು ಇಳಿಯಿತು. ಅವಳು ಕೃತಜ್ಞತೆಯಿಂದ ಪ್ರಭುಚರಣಗಳನ್ನು ನಮಸ್ಕರಿಸಿ ಮರಳಿ ದಳು.

ಗೂಢವಿಚಾರದಲ್ಲಿ ಮಗ್ನನಾದ ರಾಜರಾಜೇಶ್ವರನು ಬೆನ್ನ ಹಿಂದೆ ಕೈಕಟ್ಟಿ ತನ್ನ ಮಹಲಿನಲ್ಲಿ ಸಾವಕಾಶವಾಗಿ ಶತಪಥ ಮಾಡುತ್ತಿದ್ದನು. ಹಾಗೆ ಅಡಿಯಿಡುತ್ತಿರುವಾಗಲೆ ಒಂದು ಬಾಗಿಲಬಳಿ ನಿಂತು ಯಾರನ್ನೊ ಕರೆದನು. ಒಡನೆಯೆ ಒಬ್ಬ ಸುಂದರ ತರುಣನು ಓಡುತ್ತ ಬಂದು ಆದರದಿಂದ ತಲೆವಾಗಿ ನಿಂತನು; ಯಾರ ಕಣ್ಣುಗಳನ್ನೂ ಸೆಳೆಯುವ ಅಸದಳ ಚೆಲುವು ಆವನದಾಗಿತ್ತು. ಕೇದಿಗೆಯ ಬಣ್ಣ, ವಿಶಾಲವೂ ತೇಜಸ್ವಿಯೂ ಆದ ಕಣ್ಣು, ಭವ್ಯ ಭಾಲಪ್ರದೇಶ, ಶಾಂತವೂ ಪ್ರಫುಲ್ಲವೂ ಆದ ಮುದ್ರೆ, ಅದರಲ್ಲಿ ಸ್ಪಷ್ಟವಾಗಿ ಮೂಡಿದ ಧೀರೋದಾತ್ತತೆ, ಪರಾಕ್ರಮಶಾಲಿ ವೀರನಿಗೊಪ್ಪುವ ಗಾಂಭೀರ್ಯ, ಸುದೃಢವೂ ಸತೇಜವೂ ಹುರಿಕಟ್ಟಾದುದೂ ಆದ ಮೈಕಟ್ಟು ಆತನದಾಗಿದ್ದಿತು. ಅಂತಹ ಆ ಧೀರೋದಾತ್ತ ಸ್ವರೂಪವನ್ನು ನೋಡಿ ಪ್ರಭುವು ಸುಪ್ರಸನ್ನನಾದನು, ಆ ತೇಜಸ್ವಿ ತರುಣನ ಬೆನ್ನಮೇಲೆ ಕೈಯಾಡಿಸುತ್ತ ಭಗವಂತನೆಂದನು— “ ಶೂರವೀರನೇ! ಸೃಷ್ಟಿಸಾಮ್ರಾಜ್ಯದಲ್ಲಿ ಮಾನವರ ಸಂಹಾರ ನಡೆದಿದೆ. ಅಲ್ಲಿ ಕೂಡಲೆ ಹೋಗಿ, ರಾಕ್ಷಸರೊಡನೆ ಹೋರಾಡಿ, ಮಾನವರ ರಕ್ಷಣೆ ಮಾಡು. ಇಂತಹ ಜೀವನ-ಮರಣದ ಪ್ರಸಂಗದಲ್ಲಿ ನೀನೇ ಅವರಿಗೆ ಆಧಾರ, ನೀನೇ ಅವರಿಗೆ ಶೀತಲಛಾಯೆ, ನೀನೇ ಅವರಿಗೆ ವಿಶ್ರಾಮಧಾಮ. ಭಗವಂತನ ಆಜ್ಞೆಯಾದೊಡನೆಯೇ ವೀರತರುಣನು ಆತನ ಚರಣಕ್ಕೆರಗಿ, ಸೃಷ್ಟಿಯ ಮೇಲೆ ಅವತೀರ್ಣನಾದನು.

ಎಲ್ಲೆಲ್ಲಿಯೂ ಆಶೆಯ ಮಂದಮಾರುತನು ಬೀಸಹತ್ತಿದನು. ತನ್ನ ಗುಣವಂತ ಸುಪುತ್ರನ ಮೃತಶರೀರದಲ್ಲಿ ಹೊರಟು ಹೋದ ಪ್ರಾಣವು ಪುನಃ ಪ್ರವೇಶಿಸಿದರೆ ಮಾತೆಗೆ ಎಷ್ಟು

ಆನಂದವಾಗಬಹುದೋ ಅದಕ್ಕಿಂತಲೂ ಹಿರಿದಾದ ಆನಂದವು ಸೃಷ್ಟಿದೇವಿಗಾಯಿತು. ಧೀರೋದಾತ್ತ ವೀರನು ಸಂಗ್ರಾಮ ಭೂಮಿಯಲ್ಲಿ ಅಡಿಯಿಟ್ಟು, ಮಾನವರ ರಕ್ಷಣೆಗಾಗಿ ರಣ ಧೀರನ ಭೂಮಿಕೆ ವಹಿಸಿ ನಿಂತನು. ಸಿಂಹನನ್ನು ನೋಡಿ ದೊಡನೆ ಪ್ರಚಂಡವೂ ಮದೋನ್ಮತ್ತವೂ ಆದ ಗಜವು ಕೂಡ ಕದ್ದುಮುಚ್ಚಿ ಹಿಂದೆಗೆಯುವಂತೆಯೇ ರಾಕ್ಷಸರು ಪಲಾಯನ ಸೂತ್ರ ಹೇಳಿದರು. ಧಾನ್ಯದ ಚೀಲ ಕಡಿದು ಕತ್ತರಿಸಲು ಬಂದ ಇಲಿಗಳು ಬೆಕ್ಕಿನ ಸುಳಿವು ಹತ್ತಿದೊಡನೆಯೇ ಧಾನ್ಯದ ಆಶೆ ತೊರೆದು ಗುದ್ದಿನಲ್ಲಿ ಒಳಗೆ ದೂರ ಅಡಗಿ ಕೂಡುವಂತೆ ಆ ತಾಮಸೀ ರಾಕ್ಷಸರು ಅಡಗಿ ಕುಳಿತರು.

ವೃಕ್ಷದ ಆಧಾರದಿಂದ ಪಕ್ಷಿಗಣವು ಸುರಕ್ಷಿತವಾಗಿರುವಂತೆಯೇ ಮಾನವರು ಆ ಶೂರವೀರನ ಆಶ್ರಯದಲ್ಲಿ ಸುರಕ್ಷಿತ ರಾಗಿದ್ದರು. ಗೋಡೆಯ ಆಧಾರದಿಂದ ಮನೆಯ ಚಪ್ಪರವು ಸಹಜವಾಗಿ ಕಟ್ಟಲ್ಪಡುವಂತೆ ಆ ಶೂರಸೇನಾನಿಯ ಆಧಾರದ ಧೈರ್ಯದಿಂದ ಮಾನವರು ತಮ್ಮ ಮಾನಸಮಂದಿರದ ಸುವರ್ಣಕಲಶವನ್ನು ಎತ್ತರವಾಗಿ ನಿಲ್ಲಿಸಿದರು. ರಾಜರಾಜೇಶ್ವರನು ಕಳುಹಿದ ಶೂರಸೇನಾನಿ **ಧರ್ಮನು** ಮಾನವರ ರಕ್ಷಣೆಗೆ ಪೃಥ್ವಿಯ ಮೇಲೆ ಬಂದು, ಮಾನವರನ್ನು ರಕ್ಷಿಸಿದನು, ಪೋಷಿಸಿದನು, ಸಾಮರ್ಥ್ಯಸಂಪನ್ನರಾಗಿ ಮಾಡಿದನು. ಧರ್ಮನ ಈ ಅತುಲ ಪರಾಕ್ರಮವನ್ನು ನೋಡಿ ಸೃಷ್ಟಿ ದೇವಿಯು ಅವನ ಕೀರ್ತಿಗಾನವನ್ನು ಮಾಡತೊಡಗಿದಳು. ಧರ್ಮನ ಮಹಿಮೆಯನ್ನು ಎಲ್ಲರೂ ಕೊಂಡಾಡತೊಡಗಿದರು. ಧರ್ಮನ ಕೀರ್ತಿಯು ತ್ರೈಲೋಕ್ಯದಲ್ಲಿ ಪಸರಿಸಿತು. ಭಗವಂತನೂ ಭಗವತಿಯೂ ಧರ್ಮನ ದಿಗ್ವಿಜಯವನ್ನು ನೋಡಿ

ಆನಂದತುಂದಿಲರಾದರು.

ದಿನದ ಹಿಂದೆ ದಿನವು ಉರುಳುತ್ತಿದ್ದಿತು. ಧರ್ಮನ ಕೀರ್ತಿ ಹೆಚ್ಚುತ್ತಲೇ ಇದ್ದಿತು. ಭಗವಂತನು ಧರ್ಮನ ಮಹಿಮೆಯನ್ನು ಭಗವತಿಯ ಮುಂದೆ ಹೇಳುತ್ತ ಪುಷ್ಪಶಯ್ಯೆಯ ಮೇಲೆ ಒರಗಿದ್ದನು. ಭಗವತಿಯು ಭಗವಂತನ ಮಾತುಗಳನ್ನು ಸಾವಧಾನಳಾಗಿ ಆಲಿಸುತ್ತಿದ್ದಳು. ಹತ್ತಿರದಲ್ಲಿಯೇ ಪ್ರಭುವಿಗಾಗಿ ಪುಷ್ಪಮಾಲೆಯನ್ನು ರಚಿಸುತ್ತಿದ್ದ ಸುನೀತಿಯತ್ತ ಅವಳ ಗಮನವು ಹೋಯಿತು. ಸುನೀತಿಯು ಏಕಾಗ್ರಚಿತ್ತದಿಂದ ಮಾಲೆಯನ್ನು ತಯಾರಿಸುತ್ತಿದ್ದಳು. ಸುನೀತಿಯ ಪರಿಶುಭ್ರವಾದ ವಸ್ತ್ರ, ಚಿತ್ತವೇಧಕ ಸೌಂದರ್ಯ, ಶಾಂತದೃಷ್ಟಿ, ಬೆನ್ನ ಮೇಲೆ ಬಿದ್ದ ದೀರ್ಘವಾದ ಕುಂತಲಭಾರ, ಸೌಜನ್ಯ, ವಿನಯ, ಮಧುರಸ್ವರ, ಮಂಜುಲವಾಣಿ—ಇವನ್ನೆಲ್ಲ ನೋಡಿದೊಡನೆ ದೇವಿಯ ಮನಸ್ಸಿನಲ್ಲೊಂದು ಮಧುರ ವಿಚಾರವು ಸುಳಿದು ಹೋಯಿತು. ಒಂದು ದಿನ ಭಗವತಿಯು ಮುದ್ದುಗುವರಿ ಸುನೀತಿಯನ್ನು ಹತ್ತಿರ ಕರೆದು ಪ್ರೀತಿಪೂರ್ಣ ಹೃದಯ-ದಿಂದೆಂದಳು— "ಮಗು ಶುಭಾಂಗಿ! ಶೂರ ಧರ್ಮನ ದಿಗ್ವಿಜಯವನ್ನು ನಿತ್ಯವೂ ನೀನು ಕೇಳುತ್ತಿರುವೆಯಲ್ಲವೇ? ಅವನ ಕೀರ್ತಿ ಮೂಲೋಕದಲ್ಲಿ ಹಬ್ಬಿದುದನ್ನು ನೀನು ತಿಳಿದಿರುವೆಯಲ್ಲವೇ? ಇಂತಹ ಶೂರ ವೀರನೊಡನೆ ನಿನ್ನ ವಿವಾಹವಾಗಬೇಕೆಂದು ನಾನು ಯೋಚಿಸಿದ್ದೇನೆ. ಅಂತಹ ಗುಣಸಂಪನ್ನ ವೀರನೇ ನಿನಗೆ ಅನುರೂಪವರನಾಗಿದ್ದಾನೆ. ನಿನ್ನ ಮನದ ಬಯಕೆ ಏನಿದೆ-ನನಗೆ ತಿಳಿಸು." ವಿನಯಶೀಲೆಯಾದ ಸುನೀತಿಯು ಕೆಳಗೆ ನೆಟ್ಟ ತನ್ನ ದೃಷ್ಟಿಯನ್ನು ತುಸುವೂ ಮೇಲಕ್ಕೆ ಮಾಡಲಿಲ್ಲ. ಸುನೀತಿಯ ಮನೋಗತವನ್ನು ತಿಳಿದು

ಕೊಳ್ಳಲು ಆಕೆಯು ಗೆಳತಿ ಸುಮತಿಗೆ ದೇವಿಯು ಹೇಳಿದಳು.

ಒಂದು ದಿನ ಸಂಧ್ಯಾಸಮಯದಲ್ಲಿ ಸುನೀತಿಯೂ ಸುಮತಿಯೂ ಹೂಗಳನ್ನು ತರಲು ಉಪವನಕ್ಕೆ ಹೋಗಿದ್ದರು. ಅಲ್ಲಿ ಬಕುಲವೃಕ್ಷದ ಕೆಳಗೆ ಬಕುಲಪುಷ್ಪಗಳ ತಳಿ ಬಿದ್ದುದನ್ನು ನೋಡಿ ಸುನೀತಿಯು ಸುಮತಿಗೆ "ಬಕುಲದ ಹೂಗಳು ಬೇಗನೆ ಬಾಡುವುದಿಲ್ಲ— ಇವುಗಳ ಸುಂದರ ಹಾರವನ್ನು ಮಾಡುವಾ" ಎಂದಳು. ಸುನೀತಿಯು ಹಾರ ಕಟ್ಟಲು ಕುಳಿತಳು. ಅದನ್ನು ಮುಗಿಸಿ ಏಳುವಷ್ಟರಲ್ಲಿ ಧರ್ಮನ ದಿಗ್ವಿಜಯದ ಮಂಗಲಗರ್ಜನೆಗಳು ಅಂತರಾಲದಿಂದ ಬಂದು ಅವರ ಕಿವಿಯಲ್ಲಿ ಅಪ್ಪಳಿಸಿದವು. ಧರ್ಮನ ಪರಾಕ್ರಮವನ್ನು ಕೇಳಿ ಅವರ ತನುವು ಆನಂದದಿಂದ ಪುಲಕಿತವಾಯಿತು. ಒಬ್ಬರ ಬಾಯಿಂದಲೂ ಮಾತು ಬರಲಿಲ್ಲ. ಇಬ್ಬರೂ ಶೀರಾ ಸ್ತಬ್ಧರಾಗಿದ್ದರು. ಮಂಗಲಗರ್ಜನೆಯ ತೆರೆಗಳು ನಿಂತುಹೋದೊಡನೆ ಅವರಿಗೆ ಎಚ್ಚರಿಕೆ ಬಂದು ಒಬ್ಬರನ್ನೊಬ್ಬರು ನೋಡತೊಡಗಿದರು. ಸುಮತಿ ನಸುನಗುತ್ತ ನುಡಿದಳು—"ಸಖಿ ಸುನೀತಿ! ನಿನ್ನ ಮಾಲೆ ಮುಗಿಯಿತು, ಹಾಗೂ ಧರ್ಮನ ವಿಜಯದ ಮಂಗಲಗರ್ಜನೆ ಕೇಳಬಂದಿತು. ಆ ಮಂಗಲಗರ್ಜನೆಯು ನಿನ್ನ ಮನದ ಹರಣ ಮಾಡಿತು ಹಾಗೂ ಈ ಮಾಲೆಯು ನಿನ್ನ ಕೈಯಿಂದ ಕಳಚಿಬಿದ್ದಿತು. ಮತ್ತೆ ಮುಂದೆ ಹೇಳಲಿಯಾ? ನಿನ್ನ ಕೈಯಿಂದ ಕೆಳಗೆ ಬಿದ್ದ ಮಾಲೆಯು ದಿಗ್ವಿಜಯಿ ಧರ್ಮನ ಕೊರಳಲ್ಲಿಯೇ ಬಿದ್ದಿತು!" ಹೀಗೆಂದು ಸುಮತಿಯು ಅವಳ ಕಡೆಗೆ ದಿಟ್ಟಿಸಿ ನೋಡಹತ್ತಿದಳು. ಸುಮತಿಯ ಮಾತುಗಳು ತನ್ನ ಕಿವಿಗೆ ಬೀಳಲೇ ಇಲ್ಲವೆಂಬಂತೆ ತೋರಿಸುತ್ತ ಸುನೀತಿಯು ಕೆಳಗೆ ನೋಡುತ್ತ ಸ್ತಬ್ಧಳಾಗಿ

ದ್ದಳು. ಅವಳನ್ನು ಮೈಮುಟ್ಟಿ ಅಲ್ಲಾಡಿಸುತ್ತ ಸುಮತಿಯೆಂದಳು— “ಈ ಸುಂದರ ಮಾಲೆಯನ್ನು ನೀನು ಪರಾಕ್ರಮಶಾಲಿಯಾದ ಧರ್ಮನ ಸಲುವಾಗಿಯೇ ತಯಾರಿಸುತ್ತಿದ್ದೆಯಾ?” ಸುನೀತಿಯು ತನ್ನ ಮನೋಗತವನ್ನು ಮರೆಮಾಡುವ ವಂಚಕ ನೇತ್ರಕಟಾಕ್ಷವನ್ನು ಬೀರುತ್ತ ನುಡಿದಳು— “ಸುಮತಿ! ಚುಪ್!” ಸುಮತಿಯು ಮತ್ತೆ ನಗೆಯ ಧ್ವನಿಯಲ್ಲಿ ಎಂದಳು— “ಈ ಚೆಲುವಾದ ಮಾಲೆಯನ್ನು ನಿನ್ನ ಕಾಣಿಕೆಯೆಂದು ಆ ಮಂಗಲಗರ್ಜನೆಯೊಡನೆಯೇ ನೀನು ಮರಳಿ ಕಳಿಸಿದೆಯಾಗಿ ತೋರುತ್ತದೆ.” ಸುನೀತಿಯು ಮತ್ತೆ ತನ್ನ ಮೌನಗರ್ಭಿತ ಮಧುರಕಟಾಕ್ಷ ಬೀರಿ ಎಂದಳು— “ಸುಮತಿ! ಚುಪ್!”

ಸುಮತಿಯು ಚಟಕ್ಕನೆ ಮುಂದಕ್ಕೆ ಸರಿದು ಹತ್ತೆಯಾಗಿ ಸುನೀತಿಡೆ ಅತ್ತು ಕುಳಿತಳು. ಸುನೀತಿಯ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು, ಸಲಿಗೆಯಿಂದ ಅವಳಿಗೆಂದಳು— “ಸಖೀ! ಅಜಿಂಕ್ಯನಾದ ಧರ್ಮನೊಡನೆ ನಿನ್ನ ವಿವಾಹವಾಗಬೇಕೆಂದು ಮಾತೆಯ ಇಚ್ಛೆಯಿದೆ. ನಿನ್ನ ಸದ್ಗುಣಸಂಪನ್ನತೆಗೆ ಆತನೊಬ್ಬನೇ ಅನುರೂಪ ವರನಾಗಿದ್ದಾನೆ—ಇದನ್ನು ನೀನು ಅರಿಯೆಯಾ? ನಿನ್ನ ಮನೋಗತವಾದರೂ ಏನಿದೆ? ಇದು ನೋಡು—ಪುಷ್ಪವು ಕೂಡ ತನ್ನಲ್ಲಿ ಅಡಗಿದ ಸುಗಂಧವನ್ನು ವ್ಯಕ್ತಗೊಳಿಸುತ್ತದೆ. ಆದರೆ ನೀನು ಮಾತ್ರ ನಿನ್ನ ಮನದಿಚ್ಛೆಯನ್ನು ತಿಳಿಯಗೊಡುವುದಿಲ್ಲ! ಇದೆಂತಹ ವಿನಯ!” ಸುನೀತಿಯ ಮುದ್ರೆಯು ಪ್ರಫುಲ್ಲವಾಯಿತು. ನೇತ್ರದಲ್ಲಿ ಹರ್ಷವು ಮಿಂಚಿತು. ತನ್ನ ಕೆನ್ನೆಯಲ್ಲಿಯೇ ನಸುನಗುತ್ತ ಅಂದಳು— “ಹಾಗಲ್ಲ, ಸುಮತೀ! ಆದರೆ....!”

ಸುಮತಿ ಚಟಕ್ಕನೆಂದಳು— “ಆದರೆ ಎಂದರೇನು ? ಆದರೆ ಗೀದರೆ ಏನೂ ಇಲ್ಲ. ಬಿದ್ದ ಗಂಟನ್ನು ಬಿಚ್ಚುವಂತೆ ನೀನು ಬಿಚ್ಚುಮನಸ್ಸಿನಿಂದ ನನ್ನೊಡನೆ ಮಾತನಾಡಲೇಬೇಕು.” ಸುಮತಿ ಮುಂದರಿದೆಂದಳು— “ಧರ್ಮನೊಡನೆ ಮದುವೆಯಾಗುವುದಕ್ಕೆ ನಿನಗಿಷ್ಟವಿಲ್ಲವೇ ?” ಸುನೀತಿಯೆಂದಳು— “ಹಾಗಲ್ಲ, ಸುಮತೀ ! ಆದರೆ....!” ಮತ್ತೆ ಸುಮತಿಯೆಂದಳು— “ಹೇಳು— ನಿನಗಾವ ಗುಣಗಳು ಸೇರುತ್ತವೆ ? ಸ್ತ್ರೀಸ್ವಭಾವವು ಪ್ರೇಮಲವೂ ಸಹನಶೀಲವೂ ತ್ಯಾಗಶೀಲವೂ ಇರುತ್ತದೆ. ಸ್ತ್ರೀಯರಿಗೆ ವಿವೇಕ, ಗಾಂಭೀರ್ಯ, ಔದಾರ್ಯ, ಪರಾಕ್ರಮ—ಎಂಬೀ ಪುರುಷರ ಗುಣಗಳು ಸೇರುತ್ತವೆ. ಈ ಗುಣಗಳಷ್ಟೇ ಅಲ್ಲ, ಶೂರ ಧರ್ಮನು ಅನಂತಪಟ್ಟು ಹೆಚ್ಚು ಶ್ರೇಷ್ಠನಿದ್ದಾನೆಂಬುದು ನಿನಗೆ ಗೊತ್ತಿಲ್ಲವೆ ?” ಸುನೀತಿಯೆಂದಳು— “ಅದೆಲ್ಲಾ ನಿಜವಿದೆ ಸುಮತೀ ! ಆದರೆ....!” ಸುಮತಿಯು ಸಖ್ಯಪ್ರೇಮದ ಹಕ್ಕಿನಿಂದ ಸುನೀತಿಯ ಗದವನ್ನು ಮೇಲಕ್ಕೆತ್ತಿ, ದೃಷ್ಟಿಗೆ ದೃಷ್ಟಿ ಹಚ್ಚಿ ಕೇಳಿದಳು— “ಈ ಆದರೆ....ಆದರೆ....ಇದೇನು ಹೇಳು ! ಈ ಒಡಪ ಒಡೆಯಲೇಬೇಕು ! ಮುಚ್ಚಿದ ಮುಷ್ಟಿಯನ್ನು ತೆರೆಯುವಂತೆ ನೀನು ನಿನ್ನ ಮಾನಸವನ್ನು ನನ್ನಮುಂದೆ ಬಿಚ್ಚಿಡಲೇಬೇಕು.” ಸುನೀತಿಯು ನಿರುಪಾಯಳಾದಳು. ಅವಳು ಸುತ್ತಲೂ ದೃಷ್ಟಿ ಬೀರಿ, ಯಾರೂ ಕೇಳುತ್ತಿಲ್ಲವೆಂಬುದನ್ನು ಖಚಿತಪಡಿಸಿಕೊಂಡಳು. ತನ್ನ ಗೆಳತಿಯ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡಳು ಹಾಗೂ ಅವಳ ಕೈಯೊಡನೆ ಅಚ್ಚೆಯಿಂದ ಚಿನ್ನಾಟವಾಡುತ್ತ ಸುನೀತಿಯು ತೀರ ಮೆಲ್ಲನೆಯ ಧ್ವನಿಯಲ್ಲಿ ಹೇಳತೊಡಗಿದಳು— “ಗೆಳತೀ ಸುಮತಿ ! ದಿಗ್ವಿಜಯಿ ಧರ್ಮನು ಮಹಾ

ಪರಾಕ್ರಮಶಾಲಿ—ನಾನು ಬಲ್ಲೆ ! ಮಾನವರಿಗೆ ರಕ್ಷಣವು ಆತನೇ—ಇದನ್ನೂ ನಾನು ಬಲ್ಲೆ ! ದೀಪವು ಕತ್ತಲೆಗೆ ಅಂಜುವುದಿಲ್ಲ ಇಷ್ಟೇ ಅಲ್ಲ, ತನ್ನ ಅಸ್ತಿತ್ವದ ಪ್ರಕಾಶದಿಂದ ಕತ್ತಲೆಯನ್ನು ಇಲ್ಲದಾಗಿಸುವುದು— ಹಾಗೆಯೇ ಶೂರ ವೀರ ಧರ್ಮನು ತಿಮಿರನಾಶಕನಾಗಿದ್ದಾನೆ. ರಣಧೀರನ ಕೈಯಲ್ಲಿಯ ಶಸ್ತ್ರವು ತನ್ನ ರಕ್ಷಣವನ್ನು ಮಾಡುವುದಲ್ಲದೆ ಶತ್ರುಗಳ ನಾಶವನ್ನು ಮಾಡುವಂತೆ ಧರ್ಮನ ಮಹತಿಯೂ ಇದೆ.” ಹೀಗೆಂದು ಸುನೀತಿಯು ಸುಮ್ಮನಾದಳು. ಸುನೀತಿಯ ಮಾತು ಕೇಳಿ ಸುಮತಿಯು ಸುನೀತಿಯ ಕೈಯೊಳಗಿಂದ ತನ್ನ ಕೈ ಬಿಡಿಸಿಕೊಂಡಳು. ಹಾಗೂ ಬಲವಾಗಿ ಚಪ್ಪಾಳೆಯಿಕ್ಕುತ್ತ ಎಂದಳು— “ಸಮ್ಮತಿಸೂಚನಾಪತ್ರವನ್ನು ನೀನೇ ಕೊಡುತ್ತಿರುವೆ ! ವಿವಾಹಕ್ಕೆ ನಿನ್ನ ಒಪ್ಪಿಗೆಯಿದೆಯೆಂಬ ಮಾತನ್ನು ನಾನು ಮಾತೆಗೆ ತಿಳಿಸುವೆ !” ಸುನೀತಿಯು ತುಂಬಾ ಕನಿಕರದ ದನಿಯಿಂದ ಎಂದಳು— “ಮೊದಲು ನನ್ನ ಮಾತನ್ನಾದರೂ ಕೇಳಿಕೋ ! ಆ ಮೇಲೆ ಏನು ಮಾಡಬೇಕು— ನೀನೇ ಹೇಳು.” ಹೀಗೆನ್ನುತ್ತ ಸುನೀತಿಯು ತನ್ನ ಕೈ ಸುಮತಿಯ ಹೆಗಲಮೇಲಿರಿಸಿ ಹೇಳತೊಡಗಿದಳು—“ಸಖೀ ಸುಮತಿ ! ಸೃಷ್ಟಿಸಾಮ್ರಾಜ್ಯದಲ್ಲಿಯ ಮೃತ್ಯುವಿನ ಭೀತಿ ನನಗೆನಿಸುತ್ತಿದೆ ! ಅಲ್ಲಿ ಅಂತೆ—ಸ್ವಾರ್ಥ ಎಂಬ ರೋಗವು ಪ್ರಬಲಿಸಿದೆ ; ಅದು ದೃಷ್ಟಿಯನ್ನೇ ಮಸುಳಿಸುತ್ತದೆಯಂತೆ. ಇನ್ನು ಈ ಭಯಂಕರ ರೋಗದಿಂದ ದೃಷ್ಟಿಯು ಅಂಧವೇ ಆಗಿಬಿಟ್ಟರೆ ಜೀವನದ ಹಾದಿಯನ್ನು ತಿಗೆಯುವುದಾದರೂ ಎಂತು? ಅಲ್ಲಿ ಅಂತೆ–ಸತ್ಯಕ್ಕೆ ಮಾನವಿಲ್ಲ ; ಪ್ರಾಮಾಣಿಕತನವೆಂಬ ಗುಣವೇ ಇಲ್ಲ. ಅಲ್ಲಿ ಅಂತೆ—ಪತಿಯು ಪತ್ನಿಯನ್ನು ತಿಳಿದು

ಕೊಳ್ಳುವುದಿಲ್ಲ ; ಪತ್ನಿಯು ಪತಿಯನ್ನು ಮನ್ನಿಸುವುದಿಲ್ಲ. ಅಲ್ಲಿ ಅಂತೆ—ಬಂಧು ಭಗಿನಿಯನ್ನು ವಿಚಾರಿಸುವುದೇ ಇಲ್ಲ ; ಭಗಿನಿಯು ಬಂಧುವನ್ನು ಸ್ಮರಿಸುವುದೇ ಇಲ್ಲ. ಹಾಗೂ ಪುತ್ರರು ಮಾತಾಪಿತರನ್ನು ಧಿಕ್ಕರಿಸುವರು. ಅಲ್ಲಿ ಅಂತೆ—ಶ್ರದ್ಧೆಗೆ ಸ್ಥಾನವೇ ಇಲ್ಲ. ವೃಕ್ಷಗಳ ಛಾಯೆಯಿಲ್ಲದ ರುಕ್ಷ ಪ್ರದೇಶದಂತಹದು ಆ ಲೋಕವು. ದೀಪಸ್ತಂಭವಿಲ್ಲದ ಸಾಗರ ಪ್ರದೇಶದಂತಹದು ಅಲ್ಲಿಯು ಸ್ಥಿತಿಯು ನೀನೇ ಹೇಳು—ಬೆಳಕಿನಲ್ಲಿಂದ ಕತ್ತಲೆಯ ಕಡೆಗೆ ಯಾರು ಹೋಗುವರು ? ನೆರಳು ಬಿಟ್ಟು ಬಿಸಿಲಲ್ಲಿ ಯಾರು ಕಸಿವಿಸಿಬಡುವರು ? ಅಮೃತ ಬಿಟ್ಟು ಜಲವನ್ನು ಯಾರು ಪ್ರಾಶನ ಮಾಡುವರು ? ಧೂಳಿಯಿರುವಲ್ಲಿ ಶುಭ್ರವಸ್ತ್ರವು ಮಲಿನವಾಗಲಾರದೇ ? '' ಸುನೀತಿಯ ಮಾತು ಕೇಳಿ ಸುಮತಿ ಆಲೋಚನೆ ಮಾಡುತ್ತ ಇಂತೆಂದಳು— '' ಸರಿ. ನೀನೆನ್ನುವುದು ನಿಜವೇ ಇದೆ. ಪಾದರಕ್ಷೆಗಳಿಲ್ಲದೆ ನಡೆದರೆ ಮುಳ್ಳು ಚುಚ್ಚುವವು. ಕವಚವಿಲ್ಲದಿದ್ದರೆ ಮೈಮೇಲೆ ಖಡ್ಗದ ಪ್ರಹಾರಗಳಾಗುವವು. ಬೇಲಿಯಿಲ್ಲದಿದ್ದರೆ ಚಿಕ್ಕ ಸಸಿ ಉಳಿಯಲಾರದು.'' ಸುಮತಿ ಗಂಭೀರಳಾಗಿ ತನ್ನಷ್ಟಕ್ಕೆ ತಾನೆನ್ನತೊಡಗಿದಳು— '' ಶ್ರದ್ಧೆಯಿಲ್ಲದಲ್ಲಿ ವಿಶ್ರಾಂತಿಯಿಲ್ಲ, ದಯೆಯಿಲ್ಲದಲ್ಲಿ ಸ್ವಾಸ್ಥ್ಯವಿಲ್ಲ; ಆಶೀರ್ವಾದವಿಲ್ಲದೆ ಫಲವಿಲ್ಲ, ಕೃಪೆಯಿಲ್ಲದೆ ಶಾಂತಿಯಿಲ್ಲ. ''

ಸುಮತಿಯು ಎಲ್ಲವನ್ನೂ ಮಾತೆಗೆ ಅರುಹಿದಳು. ದೇವಿಯೆಂದಳು— '' ಎಷ್ಟು ಗುಣಶಾಲಿಯಾಗಿದ್ದಾಳೆ ಮಗು ಸುನೀತಿ ! ಮೃತ್ಯುಲೋಕದಲ್ಲಿ ಕಾಲಿಡಲೂ ಒಲ್ಲದಾಗಿದೆ ಇವಳಿಗೆ ! ಮರಣಾಧೀನರ ಗಾಳಿಯ ಸೋಂಕೂ ಈಕೆಗೆ ಬೇಡವಾಗಿದೆ ! ಸರಿ ! ನಿಷ್ಕಲಂಕರಿಗೆ ಕಲಂಕಿತವಾದುದಾವುದೂ

ಒಲ್ಲೆನಿಸುತ್ತದೆ. ಪಾವಿತ್ರ್ಯಕ್ಕೆ ಅಪಾವಿತ್ರ್ಯದ ಬೇಜಾರು ಬರುತ್ತದೆ. ಶುದ್ಧತೆಗೆ ಅಶುದ್ಧತೆಯ ದರ್ಶನವೂ ಬೇಡೆನಿಸುತ್ತದೆ." ದೇವಿಯು ಸುನೀತಿಗೆಂದಳು—" ಮಗು ಶುಭಾಂಗಿ! ನಿನ್ನ ಭೀತಿ ನಿರಾಧಾರವಾದುದು. ನೋಡು ಮಗು, ವಜ್ರವು ಎಲ್ಲಿದ್ದರೂ ವಜ್ರವೇ. ವಜ್ರಕ್ಕೆ ಕಲೆಹತ್ತದಂತೆಯೇ ಸ್ವಾರ್ಥರೋಗವು ಸಬಲರಿಗೆ ತಗಲುವುದೇ ಇಲ್ಲ. ಸೂರ್ಯನೆಂದೂ ಕಪ್ಪೇರದಂತೆ ಮಾಂಗಲ್ಯವು ಎಂದೂ ಮಂದಗೊಳ್ಳುವುದಿಲ್ಲ. ಸಾಗರವು ಎಂದೂ ಬತ್ತದಂತೆ ಪಾವಿತ್ರ್ಯವು ಎಂದೂ ಲುಪ್ತವಾಗುವುದಿಲ್ಲ. ನಿನ್ನ ಮಾಂಗಲ್ಯವೂ ಪಾವಿತ್ರ್ಯವೂ ಮೃತ್ಯುಲೋಕದಲ್ಲಿಯೂ ಶಾಶ್ವತವಾಗಿ ಉಳಿದಾವು. ಮೃತ್ಯುಲೋಕವು ಮರಣಾಧೀನರಿಗಾಗಿಯೇ ಇದ್ದರೂ ಧರ್ಮನೂ ಸುನೀತಿಯೂ ಅಲ್ಲಿ ಅಮರರಾಗಿಯೇ ಇರುವರು!"

ಧರ್ಮ-ಸುನೀತಿಯರ ಮಂಗಲವಿವಾಹದ ಸಿದ್ಧತೆ ಸಂಭ್ರಮದಿಂದ ಸಾಗಿತು. ಪರ್ಜನ್ಯನು ತಳಿಹಾಕಿದನು. ಆಕಾಶರಾಜನು ಭವ್ಯಮಂಟಪವನ್ನು ರಚಿಸಿದನು. ವಿವಿಧ ವರ್ಣಗಳ ವಸ್ತ್ರ ಪರಿಧಾನ ಮಾಡಿ ಮೇಘಗಳು ಸ್ವಾಗತಕ್ಕಾಗಿ ನಿಂತವು. ಪವನನು ಮಂಗಲ ವಿವಾಹಮಹೋತ್ಸವದ ಆಮಂತ್ರಣವನ್ನು ಮನೆಮನೆಗೆ ತಲುಪಿಸಿದನು. ಮಂಗಲವಾದ್ಯಗಳು ಮೊಳಗತೊಡಗಿದವು. ಓಲಗದ ಗಾಯಕರು ಹಾಡಹತ್ತಿದರು. ಧರ್ಮ-ಸುನೀತಿಯರ ಮದುವೆಯೊಂದು ಅಪೂರ್ವ ಸಮಾರಂಭವಾಗಿದ್ದಿತು. ಬಡವರು-ಬಲ್ಲಿದರು, ಸ್ತ್ರೀ-ಪುರುಷರು, ಪಶು-ಪಕ್ಷಿಗಳು ಎಲ್ಲರಿಗೂ ಅಲ್ಲಿ ಮುಕ್ತದ್ವಾರವಿದ್ದಿತು. ಧರ್ಮ-ಸುನೀತಿಯರಿಗೆ ಬಂದ ಉಡುಗೊರೆಗಳ ಭಾರ ಹೊತ್ತು ಹೊತ್ತು ಸೃಷ್ಟಿದೇವಿಗೆ ಸಾಕುಬೇಕಾಯಿತು. ಎಲೆಗೊಂದು ಹಣ್ಣು ಬಿಟ್ಟು ಬಾಗಿ ಬಳು

ಕುವ ಬಳ್ಳಿಯಂತೆ ಸೃಷ್ಟಿದೇವಿಯು ಗತಿಯಾಯಿತಾದ
ಭೂಷಣಗಳ ಭಾರದ ಭೂಷಣವು ಯಾರಿಗೆನಿಸಲಿಕ್ಕಿ
ಧರ್ಮ-ಸುನೀತಿಯರ ಭೂಷಣಾಲಂಕಾರದಿಂದ ಸೃಷ್ಟಿದೇ
ವೈಭವಕ್ಕೆ ಕಲಶವಿಟ್ಟಂತಾಯಿತು. ಈ ಅಪೂರ್ವ ವೈ
ವಿವಾಹಸಮಾರಂಭವು ಮುಗಿದು, ಅತಿಥಿಗಳೆಲ್ಲರೂ ತಂ
ಮನೆಗೆ ಮರಳಿದರು.

ಜಾಜಿಮಲ್ಲಿಗೆ-ಸೂಜಿಮಲ್ಲಿಗೆಗಳಿಂದ ಸಿಂಗರಿಸಿದ ಆಸನದ ಮೇಲೆ ವಧೂವರರು ಕುಳಿತಿರುವಾಗ ರಾಜರಾಜೇಶ್ವರನ ಸುಪ್ರಸನ್ನವದನದಿಂದ ಅಲ್ಲಿ ಪ್ರಕಟನಾದನು. ಸುನೀತಿಂ ತಲೆಯ ಮೇಲೆ ಕೈಯಿಟ್ಟು, "ಅಷ್ಟಪುತ್ರಾ ಸೌಭಾಗ್ಯವ. ಭವ" ಎಂದು ಆಶೀರ್ವದಿಸಿದನು; ಹಾಗೂ ರೇಶ್ಮೆಯ ವಸ್ತ್ರದಿಂದ ಮುಚ್ಚಿದ ಅಮೌಲ್ಯ ವಸ್ತುವೊಂದನ್ನು ಅವರೀರ್ವ ಮುಂದಿರಿಸಿ ಎಂದನು— "ಮಕ್ಕಳೇ, ಮೃತ್ಯುಲೋಕದಲ್ಲಿ ಹಾಗಲೂ ನಿಮಗೆ ಅಮೃತದ ಪಾನವೇ ಆಗಲೆಂದು ಸ್ವರ್ಗ ಲೋಕದ ಅಮೃತವನ್ನು ಇಲ್ಲಿಗೆ ತಂದಿರುವೆನು. ಜನ್ಮಜನ್ಮಾ ತರಗಳಲ್ಲಿ ತಪಶ್ಚರ್ಯೆಯನ್ನೆಸಗಿದರೂ ಆ ಅಮೃತವು ಲಭಿ ಲಾರದು, ಸರ್ವಸ್ವದ ದಾನ ಮಾಡಿದರೂ ಅದು ದೊರಕಲಾ ರದು,— ಅಂತಹ ಅಮೃತಕುಂಭವನ್ನು ನಿಮಗೆ ದಯ ಪಾಲಿಸುತ್ತಿರುವೆ. ಈ ಅಮೃತಕುಂಭದಲ್ಲಿಯ ಅಮೃತವು ಎಂದಿಗೂ ಕಡಿಮೆಯಾಗಲಾರದು. ಸಮುದ್ರವು ಎಂದೆಂದಿಗೂ ತುಂಬ ತುಂಬಿರುವಂತೆ ಈ ಅಮೃತಕುಂಭವೂ ಎಂದೆಂದಿಗೂ ತುಂಬಿರುವುದು." ಭಗವಂತನು ಮುಂದೆಂದನು— "ಮಕ್ಕಳೇ! ಮನುಷ್ಯನು ಜೀವವನ್ನು ಜತನದಿಂದ ಕಾಯುವಂತೆ ಈ ಅಮೃತಕುಂಭವನ್ನು ಜಪ್ಪಿಸಿರಿ. ಎಲ್ಲಿ ಹುಡಿಯಿರುವುದೋ,

ಗೆಯಿರುವುದೋ, ಕತ್ತಲೆಯಿರುವುದೋ, ಬಾಯ್ಬಡಕತನ ವುದೋ ಅಂಥಲ್ಲಿ ಅಮೃತಕುಂಭದ ಉಚ್ಚಾರವನ್ನೂ ಬೇಡಿರಿ. ಎಲ್ಲಿ ಸ್ವಚ್ಛತೆಯಿದೆಯೋ, ಸೌಗಂಧ್ಯವಿದೆಯೋ, ತ್ರತೆಯಿದೆಯೋ, ಪ್ರಕಾಶವಿದೆಯೋ ಅಂಥ ನಿಮ್ಮ ಬಿರದಲ್ಲಿಯೇ ಈ ಅಮೃತಕುಂಭವನ್ನಿಡಿರಿ. ಇದರ ಮೇಲಿನ ರೇಶ್ಮೆಯ ವಸ್ತ್ರದ ಹೊದಿಕೆಯು ಹಾಗೇ ಇರಲಿ. ಏಕೆಂದರೆ ಆರೋಗ್ಯ-ಸೌಖ್ಯಗಳ ಉದ್ದ-ಅಡ್ಡ ಎಳೆಗಳನ್ನಿಟ್ಟು, ಸಮಾಧಾನದ ಸೂಕ್ಷ್ಮತಂತುಗಳಿಂದ ಈ ವಸ್ತ್ರವನ್ನು ಹೆಣೆದದ್ದಾದೆ. ಕಾಣಲು ನಾಜೂಕಾಗಿಯೂ ಮುಟ್ಟಲು ಮೃದುವಾಯೂ ಇರುವ ಈ ಆಚ್ಛಾದನವಸ್ತ್ರವು ಕಸುವುಳ್ಳದ್ದೂ ಹುರಿಯುಳ್ಳದ್ದೂ ಆಗಿದೆ. ಅದೆಂದಿಗೂ ಜರ್ಜರವಾಗದು. ಈ ವಸ್ತ್ರದ ಸ್ಪರ್ಶದಿಂದ ಆರೋಗ್ಯವೂ ಸುಖಸಮಾಧಾನಗಳೂ ಪ್ರಾಪ್ತವಾಗುವವು. ಆದರೆ ಇದರ ಪಾಲು ಮಾತ್ರ ನಿಮ್ಮ ಹಿತೆ-ವಿಶ್ವಾಸಿಕ ವರ್ಗಕ್ಕೇನೇ ದೊರೆಯುವುದು. ಹಾಲಿನ ಪಾಲು [illegible]ಗೆ ಸಿಕ್ಕುವುದು! ಮತ್ತಿದು ನೋಡಿ! — ರಾಜಕುಮಾರಿಯು ರಾಜಪುತ್ರನಿಗೇನೇ ಲಭ್ಯಳಾಗುವಂತೆ ನಿಮ್ಮ ಪ್ರೇಮಿಜನರಿಗೇನೇ ಈ ಅಮೃತಪಾನದ ಹಕ್ಕು ಇರುವುದು.” ಭಗವಂತನು ಸುನೀತಿಗೆಂದನು—“ನಿನ್ನ ಸುಮತಿ ನಿನ್ನ ಜೊತೆಗಾತಿಯಾಗಿಯೇ ಇರುವಳು.” ಹೀಗೆನ್ನುತ್ತ ಭಗವಂತನು ಹೋಗಲಿದ್ದನು. ಸುನೀತಿ-ಸುಮತಿಯರು ಭಗವಂತನ ಚರಣಕ್ಕೆರಗಿದರು. ಅವರ ಕಂಠವು ಗದ್ಗದಿತವಾದುದನ್ನು ನೋಡಿ, ಭಗವಂತನೆಂದನು— “ನಿಮಗೇತರ ದುಃಖವು? ಕಂಬನಿಗೇನು ಕಾರಣ?” ಇಬ್ಬರೂ

ಮಾರ್ನುಡಿದರು— “ ತಾತ ! ನಿಮ್ಮ ನಿತ್ಯ ದರ್ಶನವು ನಮಗಾಗುವುದಿಲ್ಲವೆಂಬುದೇ ನಮ್ಮ ದುಃಖಕ್ಕೆ ಕಾರಣವು ! ” ಭಗವಂತನು ಹಿಗ್ಗಿನಿಂದ ಗಹಗಹಿಸಿ ನಕ್ಕು ನುಡಿದನು— “ ಓಹೋ ! ಇಷ್ಟೇನೇ! ಪರಾಕ್ರಮಶಾಲಿಯಾದ ಧರ್ಮನು ಎಲ್ಲ ಏರ್ಪಾಡನ್ನೂ ಮಾಡಿಟ್ಟಿರುವನು. ಮಕ್ಕಳೇ, ಇದು ನೋಡಿ! ಧರ್ಮನು ಕಟ್ಟಿದ ಮಂದಿರದ ನಡುಮನೆಯೊಳಗಿನಿಂದ ಪಶ್ಚಿಮದಿಕ್ಕಿಗೆ ಪಾವಟಿಗೆಗಳಿವೆ. ಅವುಗಳನ್ನು ಹತ್ತಿ ಮಹಡಿಗೆ ಹೋದರೆ ನೇರವಾಗಿ ನನ್ನ ಪ್ರಾಸಾದದಲ್ಲಿ ಬರಲು ಅನುಕೂಲವಿದೆ. ” ಇಬ್ಬರನ್ನೂ ಅಕ್ಕರೆಯಿಂದ ತಕ್ಕೈಸಿ ಭಗವಂತನು ಅಂತರ್ಧಾನ ಹೊಂದಿದನು. ಸುನೀತಿ-ಸುಮತಿಯರು ಒಬ್ಬರನ್ನೊಬ್ಬರು ನೋಡುತ್ತ ಆಶ್ಚರ್ಯದಿಂದ ಉದ್ಗರಿಸಿದರು,— “ ಸ್ವರ್ಗ-ಮರ್ತ್ಯಗಳಿಗೆ ಸೇತುವೆಯನ್ನು ಕಟ್ಟಿರುವನೀ ಧರ್ಮನು! ಧನ್ಯ ಧನ್ಯನು ಈ ಧರ್ಮನು !! ”

ಅಘಟಿತ ಘಟನೆಯು ಅದೆಂದಿಗಾದರೂ ಗುಪ್ತವಾಗಿ ಉಳಿಯುವುದೇ ? ಧರ್ಮ-ಸುನೀತಿಯರ ಮಂದಿರದಲ್ಲಿ ಅಮೃತಕುಂಭವಿರುವ ವಾರ್ತೆಯು ಸಕಲ ಸೃಷ್ಟಿಸಾಮ್ರಾಜ್ಯದಲ್ಲಿ ಹಬ್ಬಿತು. ಹಾಗೂ ಧರ್ಮ-ಸುನೀತಿಯರ ಮಂದಿರದೊಳಗಿಂದ ಸ್ವರ್ಗಕ್ಕೆ ಹೋಗಲು ಸನಿಹದ ದಾರಿ ಇರುವುದು ತಿಳಿದು ಬಂದು ಹಲವು ಸುಜನರು ಆ ಮಂದಿರಕ್ಕೆ ಬರತೊಡಗಿದರು !!

ಓಂ ಶಾಂತಿಃ ಶಾಂತಿಃ ಶಾಂತಿಃ